ಮೈಸೂರು ವಿಶ್ವವಿದ್ಯಾನಿಲಯ ಕನ್ನಡ ಗ್ರಂಥಮಾಲೆ — ೩೩

ಪ್ರಧಾನ ಸಂಪಾದಕ :

ಕೆ. ವಿ. ಪುಟ್ಟಪ್ಪ, ಎಂ. ಎ.

# ಶ್ರೀ ಕೃಷ್ಣ ಚರಿತೆ




ಸಂಪಾದಕ :

ಕೆ. ವೆಂಕಟರಾಮಪ್ಪ, ಎಂ. ಎ.

ಮೈಸೂರು ವಿಶ್ವವಿದ್ಯಾನಿಲಯ

ಮೈಸೂರು

೧೯೫೫

ಕ್ಯಾಲಿಕೊ ಪ್ರತಿ ರೂ. ೧/೧೨ ] [ ಸಾದಾ ಪ್ರತಿ ರೂ. ೧/೪

# ಮು ನ್ನು ಡಿ

ಶುಕ ಮುನಿಯಿಂದ ವಿರಚಿತವಾದ ಸಂಸ್ಕೃತ ಭಾಗವತ ಬಹು ಪ್ರಾಚೀನ ಕಾಲದಿಂದಲೂ ತಪ್ತ ಜೀವರಿಗೆ ಭಕ್ತಿರಸ ದಾನಮಾಡುತ್ತ ಬಂದಿರುವ ಒಂದು ದಿವ್ಯ ಕಾವ್ಯ. ಈ ಕಾವ್ಯ ವಾಲ್ಮೀಕಿ ರಾಮಾಯಣದಷ್ಟು ಜನಪ್ರಿಯವಾಗಿಲ್ಲದಿರುವುದಕ್ಕೆ ಅದರ ಭಾಷಾಕಾಠಿಣ್ಯವೂ ಒಂದು ಮುಖ್ಯ ಕಾರಣವೆಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಆದರೆ ಸಂಸ್ಕೃತ ಭಾಷೆಗೆ ಅನ್ವಯಿಸುವಂತೆ ಆ ಹೇಳಿಕೆ ಹೇಗೇ ಇರಲಿ, ದೇಶ ಭಾಷೆಗಳೇನೊ ಭಾಗವತದ ರಸಾಮೃತವನ್ನು ಸಾಮಾನ್ಯ ಜನಕ್ಕೆ ಸುಲಭ ರೀತಿಯಲ್ಲಿ ನೀಡುತ್ತ ಬಂದಿವೆ. ಇನ್ನು ಮುಂದಾದರೂ ಗೀರ್ವಾಣ ಭಾಷೆಯ ಸಂಸ್ಕೃತಿ ದೇಶಭಾಷೆಗಳಲ್ಲಿಯೆ ಜೀವಂತವಾಗಿರುತ್ತದೆ.

ಭಾರತ ರಾಮಾಯಣಗಳು ಕನ್ನಡ ಸಾಹಿತ್ಯದಲ್ಲಿ ಮೈಗೊಂಡು ಬಹು ಕಾಲದಿಂದಲೂ ಜನಪ್ರಿಯವಾಗಿ ಅನೇಕ ಪಂಡಿತ ಪಾಮರ ಚೇತನಗಳಿಗೆ ಪುಷ್ಟಿಯನ್ನು ನೀಡಿವೆ. ಭಾಗವತದ ದಶಮ ಸ್ಕಂಧವನ್ನು ಮೊತ್ತಮೊದಲು ಕನ್ನಡದಲ್ಲಿ ರಚಿಸಿದ ಹಿರಿಮೆ ಚಾಟುವಿಠ್ಠಲನೆಂಬ ಹೆಸರಿನಿಂದ ಪ್ರಚುರನಾದ ಕವಿಯದು. ಭಾಮಿನಿ ಷಟ್ಪದಿಯಲ್ಲಿ ದೀರ್ಘಕಾವ್ಯವನ್ನು ಬರೆದ ಕವಿಗಳಲ್ಲಿ ಇವನೂ ಒಬ್ಬ. ಇವನ ಷಟ್ಪದಿಗಳು ಕುಮಾರವ್ಯಾಸನ ಷಟ್ಪದಿಗಳೆತ್ತರಕ್ಕೆ ಏರಲಾರವು. ಈ ಕಾವ್ಯದ ಕೆಲವು ಭಾಗಗಳು ತೊರವೆಯ ರಾಮಾಯಣದ ಕಾವ್ಯ ಮಟ್ಟಕ್ಕಿಂತ ಉತ್ತಮತರವಾಗಿವೆ. ರುಕ್ಮಿಣೀ ಕಲ್ಯಾಣ, ಕುಚೇಲನ ಭಾಗ್ಯ—ಇಂತಹ ಕೆಲವು ಸನ್ನಿವೇಶಗಳಲ್ಲಿ ಕವಿಕರ್ಮ ಪ್ರತಿಭಾಸ್ಪರ್ಶಿಯಾಗುವುದನ್ನು ಕಾಣಬಹುದು. ಕಾವ್ಯವನ್ನು ಓದಿದಮೇಲೆ ಇದೊಂದು ದ್ವಿತೀಯ ವರ್ಗದ ಕಾವ್ಯವೆಂದೆನಿಸಿದರೂ ಕಾವ್ಯವಸ್ತುವಿನ ಮಹಿಮೆಯಿಂದಲೆ ಇದು ಜನಪ್ರಿಯವೂ ಪೂಜ್ಯವೂ ಆಗಿದೆ.

ಪ್ರಾಚೀನ ಕನ್ನಡ ಸಾಹಿತ್ಯವನ್ನು ಜನಸಾಮಾನ್ಯರಲ್ಲಿಯೂ ವಿದ್ಯಾರ್ಥಿ

ವರ್ಗದವರಲ್ಲಿಯೂ ಹೆಚ್ಚಾಗಿ ಪ್ರಚಾರಕ್ಕೆ ತರಲೆಂದು ಉತ್ತಮ ಕಾವ್ಯ ಸಂಗ್ರಹಗಳನ್ನು ವಿಶ್ವವಿದ್ಯಾನಿಲಯದ ಕನ್ನಡ ಗ್ರಂಥಮಾಲೆ ಪ್ರಕಟಿಸುತ್ತ ಬಂದಿದೆ. ಶ್ರೀ ಕೃಷ್ಣ ಚರಿತೆಯ ಈ ಸಂಗ್ರಹವನ್ನು ವಿಶ್ವವಿದ್ಯಾನಿಲಯದ ಅಧ್ಯಾಪಕರಲ್ಲೊಬ್ಬರಾದ ಶ್ರೀ ಕೆ. ವೆಂಕಟರಾಮಪ್ಪನವರು ಉತ್ತಮವಾಗಿ ಅಳವಡಿಸಿ ಕೊಟ್ಟಿದ್ದಾರೆ. ಆ ಸೇವೆ ಸಾರ್ಥಕವಾಗುವಂತೆ ಸಹೃದಯರು ಶ್ರೀ ಕೃಷ್ಣಚರಿತಾಮೃತವನ್ನು ಸವಿದು ಪುನೀತರಾಗಲಿ!

**ಕೆ. ವಿ. ಪುಟ್ಟಪ್ಪ, ಎಂ.ಎ.**
ಪ್ರಧಾನ ಸಂಪಾದಕ
ಮತ್ತು
ಪ್ರಕಟನ ಸಮಿತಿಯ ಅಧ್ಯಕ್ಷ

# ವಿ ಷ ಯ ಸೂ ಚಿ ಕೆ

—— o ——

# ಶ್ರೀ ಕೃಷ್ಣ ಚರಿತೆ

## — ಪೀಠಿಕೆ —

### ಭಾಗವತ

ಶ್ರೀ ವ್ಯಾಸಮಹರ್ಷಿಗಳು ಲೋಕಹಿತಾರ್ಥವಾಗಿ ವಿರಚಿಸಿದರೆಂದು ಪ್ರಸಿದ್ಧವಾಗಿರುವ ಹದಿನೆಂಟು ಪುರಾಣಗಳಲ್ಲಿ ಶ್ರೀ ಭಾಗವತವೂ ಒಂದು. ಆದರೆ ಇದನ್ನು ಶುಕಮಹರ್ಷಿಗಳು ಹೇಳಿದರೆಂದೂ ಒಂದು ಹೇಳಿಕೆಯಿದೆ. "ವಿಷಮವೇದಮಹಾಸುರದ್ರುಮದ ಎನಿಪ ಭಾಗವತಾಖ್ಯ ಫಲವು ಈ ವಸುಮತಿಗೆ ಶುಕಮುಖಸರೋರುಹಗಳಿತವಾಯ್ತು." ಭಾಗವತವು ಶುಕಮುಖದಿಂದ ಬಂದದ್ದು. ಶುಕರು ಇದನ್ನು ಪರೀಕ್ಷಿತಮಹಾರಾಜನಿಗೆ ಅವನ ಅಂತ್ಯಕಾಲದಲ್ಲಿ ಉಪದೇಶಿಸಿದರು. ಭಾಗವತದ ಉತ್ಪತ್ತಿಯನ್ನು ಕುರಿತು ಆ ಗ್ರಂಥದಲ್ಲಿಯೇ ಈ ಹೇಳಿಕೆಯಿದೆ:—

ಆದಿನಾರಾಯಣನಜಂಗಜ
ನಾದರಿಸಿ ನಾರದಗೆ ನಾರದ
ಬಾದರಾಯಣಮುನಿಗೆಯಾ ಮುನಿಯೊಲವಿನಲಿ ಶುಕಗೆ
ಭೇದವಿಲ್ಲದೆ ಶುಕನುಚಿತ್ತಾ
ಹ್ಲಾದದಿಂ ನೃಪತಿಲಕಗೊರೆದುದ
ನ್ನೈದೆ ನಿಮ್ಮನಿಬರಿಗೆ ವಿಸ್ತರಿಸಿದೆನುನಾನಿಂದು.

ಮೊದಲು ಇದನ್ನು ಭಗವಂತನಾದ ನಾರಾಯಣನೇ ಹೇಳಿದನು. ಅದನ್ನು ನಾರದರು ತರುವಾಯ ವ್ಯಾಸಮಹರ್ಷಿಗಳಿಗೆ ಉಪದೇಶಿಸಿದರು. ಅವರು ಶುಕರಿಗೆ ಹೇಳಿಕೊಟ್ಟರು. ಶುಕರು ಮುಮುಕ್ಷುವಾದ ಪರೀಕ್ಷಿತನಿಗೆ ಭಾಗವತವನ್ನು ಉಪದೇಶಿಸಿದರು. ಆ ಸಮಯದಲ್ಲಿ ಅದನ್ನು ಕೇಳಿದ ಸೂತಮಹರ್ಷಿಗಳು ನೈಮಿಶಾರಣ್ಯದಲ್ಲಿ ಸೇರಿದ ಶೌನಕಾದಿ ಋಷಿಸಭೆ

ಯಲ್ಲಿ ವಿಸ್ತಾರವಾಗಿ ಹೇಳಿದರು. ಹೀಗೆ ಈ ಗ್ರಂಥ ಭಗವಂತನಿಂದಲೇ ಮೊದಲು ರಚಿತವಾಯಿತು. ಆದ್ದರಿಂದ ಇದಕ್ಕೆ ಭಾಗವತವೆಂದು ಹೆಸರು.

ಭಗವತ್ ಚರಿತ್ರೆಯನ್ನು ಒಳಗೊಂಡಿರುವುದರಿಂದ ಇದು ಭಾಗವತ. ಭಗವತ್ ಎಂಬುದು ಪರದೈವದ ಹೆಸರು. ದೇವರನ್ನು ಆ ಹೆಸರಿನಿಂದ ಪೂಜಿಸುವವರು ಭಾಗವತರು. ಈ ಪುರಾಣದಲ್ಲಿ ಭಗವಂತನ ಕಥೆಯೇ ಅಲ್ಲದೆ ಪ್ರಹ್ಲಾದ ನಾರದಾದಿ ಪರಮಭಾಗವತರ ಕಥೆಗಳೂ ಇವೆ. ಭಗವತ್, ಭಾಗವತರ ಚರಿತ್ರೆಗಳನ್ನು ಹೇಳುವಾಗ ಅತ್ಯಂತ ಪ್ರಾಚೀನ ಕಾಲದಿಂದಲೂ ನಮ್ಮ ನಾಡಿನಲ್ಲಿ ಬೆಳೆದು ಬಂದಿರುವ ಭಾಗವತ ಧರ್ಮದ ವಿವರಣೆಯೂ ಈ ಪುರಾಣದಲ್ಲಿ ಬಂದಿದೆ. ಆದ್ದರಿಂದ ಇದು ಭಾಗವತರಿಗೆ ಪರಮಾದರಣೀಯವಾದ ಪೂಜ್ಯಗ್ರಂಥ.

"ಯಾರು ನನ್ನ ಕಥೆಯನ್ನು ಹೇಳುತ್ತಾರೆಯೋ, ಯಾರು ನನ್ನ ಕಥೆಯಿಂದ ಸಂತೋಷಪಡುತ್ತಾರೆಯೋ ಅಂಥವರು ಭಾಗವತರು" ಎಂದು ಭಗವಂತನೇ ಹೇಳಿದ್ದಾನೆ. ಆದ್ದರಿಂದ "ಹರಿಗುಣಸ್ತುತಿ, ಹರಿಪದಾಂಬುಜ ಶರಣಜನ ಸಂಕೀರ್ತನಸ್ತುತಿ, ಹರಿಪದಾಸತಭಕ್ತಿ"ಗಳು ಭಾಗವತರ ಮುಖ್ಯ ಲಕ್ಷಣಗಳು. ಯಾರು ಸರ್ವಭೂತಗಳಲ್ಲಿಯೂ ಭಗವಂತನನ್ನು ಕಾಣುತ್ತಾರೆಯೋ ಅವರು ಭಾಗವತರೆಂದು ಹೇಳುವುದೂ ಉಂಟು. 'ಓನ್ನಮೋ ಭಗವತೇ ವಾಸುದೇವಾಯ' ಎಂಬುದು ಭಾಗವತರ ಮುಖ್ಯ ಮಂತ್ರ. ವಾಸುದೇವನೇ ಪರಮದೈವವೆಂದು ನಂಬುವ, ಭಕ್ತಿ ಪ್ರಧಾನವಾದ ಮತಕ್ಕೆ ಭಾಗವತಮತವೆಂದು ಹೆಸರು. ಈ ಭಾಗವತ ಧರ್ಮವೇ ವೈಷ್ಣವಧರ್ಮದ ಮೂಲರೂಪ. ಭಾಗವತ ಧರ್ಮಕ್ಕೇ ಸಾತ್ವತ, ಏಕಾಂತಿಕ, ಪಾಂಚರಾತ್ರ ಎಂಬ ಹೆಸರುಗಳೂ ಉಂಟು. ಈ ಧರ್ಮವನ್ನು ನಾರಾಯಣನು ನಾರದನಿಗೂ ಅನಂತರ ಅರ್ಜುನನಿಗೂ ಉಪದೇಶಿಸಿದನು. ಅರ್ಜುನನಿಗೆ ಮಾಡಿದ ಉಪದೇಶವೇ ಭಗವದ್ಗೀತೆ. ಗೀತೆ ಭಾಗವತ ಧರ್ಮಕ್ಕೆ ಮುಖ್ಯ ಗ್ರಂಥ. ಮಹಾಭಾರತದ ನಾರಾಯಣೀಯ

ಪರ್ವ, ಭಗವದ್ಗೀತೆ, ನಾರದ ಪಂಚರಾತ್ರ, ಭಾಗವತ, ಇವೆಲ್ಲವು ಗಳಲ್ಲಿಯೂ ಭಗವಾನ್ ವಾಸುದೇವನೇ ಉಪದೇಶಿಸಿದ ಭಾಗವತ ಧರ್ಮದ ಸ್ವರೂಪವನ್ನು ಕಾಣಬಹುದು. ಭಾಗವತರು ತಮ್ಮ ಪರಮಾಚಾರ್ಯ ನಾದ ಶ್ರೀಕೃಷ್ಣ ವಾಸುದೇವನಿಗೇ ದೇವತ್ವದ ಗೌರವವನ್ನು ಸಲ್ಲಿಸಿ ಪೂಜಿ ಸುತ್ತಾರೆ.

ವಾಸುದೇವನು ಸಾತ್ವತನೆಂದು ವಿಷ್ಣುಪುರಾಣ ಮತ್ತು ಭಾಗವತ ಗಳಲ್ಲಿ ಹೇಳಿದೆ. ಯಾದವ ಮತ್ತು ವೃಷ್ಣಿಗಳ ವಂಶವೃಕ್ಷಗಳನ್ನು ವರ್ಣಿಸು ವಾಗ ಅಂಶನಮಗ ಸತ್ವತ, ಅವನ ವಂಶಸ್ಥರು ಸಾತ್ವತರು, ಎಂದು ಹೇಳಿದೆ. ಅಂಧಕ, ವೃಷ್ಣಿ, ಮತ್ತು ಸಾತ್ವತರು ಯಾದವರ ಬೇರೆ ಬೇರೆ ಪಂಗಡಗ ಳೆಂದು ಭಾಗವತ ಹೇಳುತ್ತದೆ. ವಾಸುದೇವನನ್ನು ಸಾತ್ವತರ್ಷಭ, ಸಾತ್ವತ ಪುಂಗವ, ಎಂದು ಮೊದಲಾಗಿ ವರ್ಣಿಸಿದೆ. ಇದರಿಂದ ವಾಸುದೇವನು ಸಾತ್ವತ ಪಂಗಡದ ಮುಖಂಡನೆಂದೂ ಆ ಸಾತ್ವತರು ಆಚರಿಸುತ್ತಿದ್ದ ಭಾಗ ವತಧರ್ಮಕ್ಕೆ ಸಾತ್ವತ ಧರ್ಮವೆಂದೂ ಹೆಸರಾಯಿತೆಂದೂ ತಿಳಿಯಬೇಕು. ಅಂತು, ವಾಸುದೇವ ಪೂಜೆಯು ಮೊದಲು ಯಾದವರಲ್ಲಿ ಬಳಕೆಯಲ್ಲಿದ್ದು ಕ್ರಮಕ್ರಮವಾಗಿ ಅದನ್ನು ಇತರರೂ ಆಚರಿಸತೊಡಗಿದರು. ಹೀಗೆ ಅದು ಭರತಖಂಡದ ನಾನಾಭಾಗಗಳಿಗೂ ಹರಡಿದಾಗ ಅಲ್ಲಲ್ಲಿ ಪ್ರಚಾರದಲ್ಲಿದ್ದ ಉಳಿದ ವೈಷ್ಣವ ಪಂಥಗಳ ತತ್ವಗಳೂ ಆಚಾರಗಳೂ ಅದರಲ್ಲಿ ಸೇರಿರಬೇಕು. ಭಾಗವತರು ಭಗವಂತನ ಮಹಿಮೆ, ಭಕ್ತವಾತ್ಸಲ್ಯ, ಸರ್ವಜ್ಞತೆ ಮುಂತಾದು ವನ್ನು ಲೋಕಕ್ಕೆ ಉಪದೇಶಿಸುವಸಲುವಾಗಿ ಕಟ್ಟಿದ ಹಲವು ಅದ್ಭುತ ಕಥೆಗಳೂ ಭಾಗವತದಲ್ಲಿ ಬೆರೆತುಕೊಂಡಿವೆ. ಜನರಲ್ಲಿ ಬಳಕೆಯಾಗಿದ್ದ ಬೇರೆ ಬೇರೆ ಭಗವತ್ಕಥೆಗಳನ್ನೆಲ್ಲ ಒಟ್ಟುಗೂಡಿಸಿ ಹರಿವಂಶ, ಭಾಗವತ ಮೊದಲಾದ ಪುರಾಣ ಗ್ರಂಥಗಳನ್ನು ರಚಿಸಿರಬಹುದೆಂದೂ ಅವುಗಳಲ್ಲೆಲ್ಲ ಭಾಗವತವೇ ಮಿಕ್ಕೆಲ್ಲ ಪುರಾಣಗಳಿಗಿಂತ ಈಚಿನದೆಂದೂ ಅನೇಕ ವಿದ್ವಾಂಸರ ಅಭಿಪ್ರಾಯ.

ಭಾಗವತವು ಹನ್ನೆರಡು ಸ್ಕಂಧಗಳನ್ನೊಳಗೊಂಡ ವಿಸ್ತಾರವಾದ

ಗ್ರಂಥ. ಮೊದಲಿನ ಎರಡು ಸ್ಕಂಧಗಳು ಪೀಠಿಕಾ ರೂಪದಲ್ಲಿವೆ. ಸೂತ ಮಹರ್ಷಿಗಳನ್ನು ಶೌನಕಾದಿಗಳು ನೈಮಿಶಾರಣ್ಯದಲ್ಲಿ ಸಂಧಿಸಿ ಕಲಿ ಯುಗದ ನರರಿಗೆ ಮೋಕ್ಷಸಾಧನೆಗೆ ಸುಲಭೋಪಾಯವಾವುದೆಂದು ಪ್ರಶ್ನಿಸಲು ಅವರು

"ತನ್ನ ಕಥೆಗಳ ಕೇಳುವಾ ಸಂ
ಪನ್ನ ಭಾಗ್ಯರ ಹೃದಯ ಕಮಲದ
ಕರ್ಣಿಕೆಯ ಮನೆಮಾಳ್ಪ ಪುಣ್ಯಶ್ರವಣಕೀರ್ತನನು
ಪನ್ನಗಾರಿಧ್ವಜನ ಘೌಘವು
ಹಾರ್ಣವಕೆ ವಡಬ ಮುಖಾನಳ
ಸನ್ನಿಭನು ತಾನೈಸಲೇ ಪನ್ನಗಶಾಯಿ. . . . ." ಎಂದು

ನುಡಿದು ಶ್ರೀ ಹರಿಯ ಧ್ಯಾನದ ಮಹಿಮೆಯನ್ನು ವರ್ಣಿಸಿ ಅದರಿಂದ ಹಿಂದೆ ಪರೀಕ್ಷಿತ ಮಹಾರಾಜನಿಗೆ ಹೇಗೆ ಮುಕ್ತಿ ಲಭಿಸಿತೆಂಬುದನ್ನು ವಿವರಿಸು ತ್ತಾರೆ. ಆಗ ಆ ಋಷಿಗಳೆಲ್ಲರೂ ಹರಿಯ ಕಥೆಯನ್ನು ತಮಗೆ ವಿಸ್ತಾರ ವಾಗಿ ಹೇಳಬೇಕೆಂದು ಬೇಡಿಕೊಳ್ಳಲು ಸೂತರು ಭಾಗವತದ ಮಹಿಮೆ ಯನ್ನು ಹೇಳಿ, "ಆ ಸಮಸ್ತ ಪುರಾಣಶಾಸ್ತ್ರ ಮಹಾಸಮುದ್ರದ ಸಾರವಿದೆಲಾ" ಎಂದು ನಡಿದು ಅವರಿಗೆ ಭಾಗವತವನ್ನು ಹೇಳಲು ತೊಡಗುತ್ತಾರೆ. ಭಗವಂತನು ಲೋಕೋದ್ಧಾರಕ್ಕಾಗಿ ಅನೇಕಾನೇಕ ಸಲ ಭೂಲೋಕದಲ್ಲಿ ಅವತರಿಸಿದನೆಂದೂ ಅವತಾರಗಳ ಸಂಖ್ಯೆಯನ್ನು ತಿಳಿಯುವುದು ಅಶಕ್ಯವೆಂದೂ ಹೇಳಿ ಅವುಗಳಲ್ಲಿ ಮುಖ್ಯವಾದುವುಗಳನ್ನು ಕುರಿತು ಪ್ರಸ್ತಾಪಿಸಿದೆ.

ಜಗದುದರನವತಾರ ಸಂಖ್ಯೆಯ
ಬಗೆಯ ಬಲ್ಲವರಾರು ಭೂಪಾಂ
ಸುಗಳ ನಭ್ರದ ತಾರೆಗಳನಾಸಾರ ಬಿಂದುಗಳ
ತೆಗೆದು ಲೆಕ್ಕಿಸಬಹುದು ಭೃಗ್ವಾ

ದಿಗಳು ಸುರನರವರರು ಮನ್ವಾ
ದಿಗಳು ಹರಿಯಂಶಾಂಶ ಸಂಭವರಿವರು ಕೇಳೆಂದ

ಭೂಮಿಯ ದೂಳಿನ ಕಣಗಳನ್ನೂ ಆಕಾಶದಲ್ಲಿನ ನಕ್ಷತ್ರಗಳನ್ನೂ ಮಳೆಯ ಹನಿಗಳನ್ನೂ ಲೆಕ್ಕಿಸಬಹುದೋ ಏನೋ ಆದರೆ ಭಗವಂತನ ಅವತಾರ ಸಂಖ್ಯೆಯನ್ನು ಊಹಿಸಲು ಬಲ್ಲವರಿಲ್ಲ. ಭೃಗು ಮುಂತಾದವರು ಮನುಗಳು ದೇವತೆಗಳು, ಮಾನವ ಶ್ರೇಷ್ಠರು, ಇವರೆಲ್ಲ ಶ್ರೀ ಹರಿಯ ಅಂಶಾಂಶಗಳಿಂದ ಸಂಭವಿಸಿದವರು. ಇವರಲ್ಲಿ ಕೆಲವರು ಮಹಾವಿಷ್ಣುವಿನ ಅಂಶದಿಂದ ಹುಟ್ಟಿದವರು. ಇನ್ನು ಹಲವರು ಕೆಲವು ಕಲೆಗಳಿಂದ ಜನಿಸಿದವರು. ಇವರೆಲ್ಲರ ಪೈಕಿ ಆ ಯಾದವ ಶಿರೋಮಣಿಯಾದ ಶ್ರೀ ಕೃಷ್ಣನು ಮಾತ್ರ ಸಾಕ್ಷಾತ್ ವಿಷ್ಣುವೇ. ರಾಕ್ಷಸರು ಹೆಚ್ಚಿಕೊಂಡರೆ ಹರಿಯು ಅವತರಿಸಿ ಅವರನ್ನು ನಿಗ್ರಹಿಸಿ ತನ್ನ ಆಶ್ರಿತರೂ ಭಕ್ತರೂ ಆದ ದೇವತೆಗಳು, ಗೋವುಗಳು, ದ್ವಿಜರು ಮುಂತಾದವರನ್ನೆಲ್ಲ ರಕ್ಷಿಸುತ್ತಾನೆ. ಭಗವಂತನ ಅವತಾರಗಳ ಕಥೆಯನ್ನು ಹೇಳುವ ಪುರಾಣಗಳ ಲಕ್ಷಣಗಳನ್ನೂ ಭಗವಲ್ಲೀಲಾಮಹಿಮೆಯನ್ನೂ ತಿಳಿಸಿ ಪ್ರಧಾನವಾದ ಇಪ್ಪತ್ತೆರಡು ಅವತಾರಗಳ ಹೆಸರುಗಳನ್ನು ಕವಿ ತಿಳಿಸಿದ್ದಾನೆ; ಸನಕಾದಿಯೋಗಿಗಳು, ಯಜ್ಞವರಾಹ, ನಾರದ, ನರ, ನಾರಾಯಣ, ಕಪಿಲ, ವೃಷಭಯೋಗಿ, ಪೃಥು, ಮತ್ಸ್ಯ, ಕೂರ್ಮ, ಧನ್ವಂತರಿ, ಮೋಹಿನಿ, ನರಹರಿ, ವಾಮನ, ಪರಶುರಾಮ, ವೇದವ್ಯಾಸ, ಶ್ರೀರಾಮ, ಬಲರಾಮ, ಶ್ರೀಕೃಷ್ಣ, ಬುದ್ಧ, ಮತ್ತು ಕಲ್ಕಿ. ಕಲ್ಕಿಯ ಅವತಾರವು ಇನ್ನೂ ಆಗಬೇಕಾದದ್ದು,

ಬಳಿಕ ಕಲಿ ಸಂಧ್ಯಾಶತದಲ
ಸ್ಖಲಿತ ವಿಕ್ರಮ ವಿಷ್ಣು ಕೀರ್ತಿಯ
ಲಲನೆಯಲಿ ಸಲೆ ಕಲ್ಕಿನಾಮದಲುದಿಸಿ ಕಲಿಯುಗವ
ಖಳನೃಪರನಪಹರಿಸಿ ಧರ್ಮವ
ನೆಲೆಗೊಳಿಸಿ ಕೃತಯುಗವ ನೆಱಿಕೈ
ಕೊಳಿಸಿ ಗೋದ್ವಿಜ ದೇವಕುಲವನು ಸಲಹಿದಪನೆಂದ.

ಕಲಿಯುಗದ ಕೊನೆಯಲ್ಲಿ ಮಹಾವಿಷ್ಣುವು ಕಲ್ಕಿನಾಮದಲ್ಲಿ ಅವತರಿಸಿ ನೀಚರಾದ ರಾಜರನ್ನೆಲ್ಲ ದಂಡಿಸಿ ಧರ್ಮವನ್ನು ಸ್ಥಾಪಿಸುತ್ತಾನೆ; ಮತ್ತೆ ಕೃತಯುಗವನ್ನು ಆರಂಭಗೊಳಿಸುತ್ತಾನೆ.

ಮೂರನೆಯ ಸ್ಕಂಧದಲ್ಲಿ ಭಾಗವತ ನಿಜವಾಗಿ ಆರಂಭವಾಗಿದೆ ಯೆನ್ನಬಹುದು. ಕಲ್ಪಾವಸಾನದ ಕಥೆ, ಬ್ರಹ್ಮನ ಉದಯ, ವೈಕುಂಠ ವರ್ಣನೆ, ಜಯವಿಜಯರ ಕಥೆ, ಹಿರಣ್ಯಾಕ್ಷ, ಹಿರಣ್ಯಕಶಿಪುಗಳ ಚರಿತ್ರೆ, ಕಪಿಲದೇವಹೂತಿಯರ ಚರಿತ್ರೆ ಇವೆಲ್ಲ ಇಲ್ಲಿ ವರ್ಣಿತವಾಗಿವೆ. ನಾಲ್ಕನೆಯ ಸ್ಕಂಧದಲ್ಲಿ ದಕ್ಷಯಜ್ಞದವೃತ್ತಾಂತವೂ ಗಿರಿಜಾಕಲ್ಯಾಣದ ಕಥೆಯೂ ಬಂದಿವೆ. ಧ್ರುವ, ಪೃಥು, ಪುರಂಜನರ ಕಥೆಗಳಿವೆ. ಐದನೆಯ ಸ್ಕಂಧ ದಲ್ಲಿ ಪ್ರಿಯವ್ರತರಾಯ, ವೃಷಭರಾಯ, ಜಡಭರತ, ಮನುಮಹೇಶ್ವರರು —ಇವರೆಲ್ಲರ ಕಥೆಗಳೂ, ಖಗೋಳ ಮತ್ತು ಸ್ವರ್ಗ ನರಕಲೋಕಗಳ ವರ್ಣನೆ ಗಳೂ ಬಂದಿವೆ. ಆರು ಮತ್ತು ಏಳನೆಯ ಸ್ಕಂಧಗಳಲ್ಲಿ ಅಜಾಮಿಳ, ವೃತ್ರಾಸುರ, ಸಪ್ತಮರುತ್ತುಗಳು, ಪ್ರಹ್ಲಾದ, ಮತ್ತು ತ್ರಿಪುರಾಸುರರ ಚರಿತ್ರೆಗಳಿವೆ. ಎಂಟನೆಯ ಸ್ಕಂಧವು ಮನುಮುನಿಗಳ ವರ್ಣನೆಮಾಡಿ ಗಜೇಂದ್ರೋಪಾಖ್ಯಾನವನ್ನು ಹೇಳುತ್ತದೆ. ದೂರ್ವಾಸರು ಇಂದ್ರನಿಗೆ ಶಾಪಕೊಟ್ಟ ಕಥೆ, ಸಮುದ್ರ ಮಥನದ ಇತಿಹಾಸ, ಮೋಹಿನಿಯ ಅವತಾರ, ವಾಮನ ಮತ್ತು ಮತ್ಸ್ಯಾವತಾರಗಳ ಕಥೆಗಳೂ ಈ ಸ್ಕಂಧದಲ್ಲಿಯೇ ಸೇರಿವೆ. ನವಮಸ್ಕಂಧದಲ್ಲಿ ವೈವಸ್ವತಮನುವಿನ ವಂಶವರ್ಣನೆ ಬರುತ್ತದೆ. ಭಕ್ತನಾದ ಅಂಬರೀಷನ ಕಥೆ, ಇಕ್ಷ್ವಾಕುವಂಶದ ವರ್ಣನೆ, ಭಗೀರಥನು ಗಂಗೆಯನ್ನು ಭೂಮಿಗೆ ತಂದ ವೃತ್ತಾಂತ, ಶ್ರೀರಾಮಾವತಾರದ ಕಥೆ, ಪರಶುರಾಮ ವೃತ್ತಾಂತ, ಮದಾಲಸೆಯ ಉಪಾಖ್ಯಾನ, ಇವು ಮುಖ್ಯ ವಾಗಿವೆ. ದಶಮಸ್ಕಂಧವೇ ಭಾಗವತದಲ್ಲಿ ಬಹಳ ಜನಪ್ರಿಯವಾದ ಭಾಗ. ನವಮಸ್ಕಂಧದ ಕೊನೆಯಲ್ಲಿ ಆರಂಭವಾದ ಯಾದವ ವಂಶವರ್ಣನೆ ಇದರಲ್ಲಿ ಮುಂದುವರಿದು ಯಾದವಶಿರೋಮಣಿಯಾದ ಶ್ರೀಕೃಷ್ಣನ ಚರಿತ್ರೆ ವಿಸ್ತಾರ ವಾಗಿ ಬಂದಿದೆ. ಶ್ರೀಕೃಷ್ಣನ ತಂದೆತಾಯಿಗಳಾದ ವಸುದೇವ ದೇವಕಿಯರ

ಮದುವೆಯ ಕಥೆಯಿಂದ ಆರಂಭವಾಗಿ ಸ್ವಾಮಿ ಅಶ್ವಮೇಧ ಯಾಗ ಮಾಡಿದ ಕಥೆಯವರೆಗೆ ಶ್ರೀಕೃಷ್ಣನ ಜೀವಿತ ವೃತ್ತಾಂತವೆಲ್ಲ ಹತ್ತನೆಯ ಸ್ಕಂಧದಲ್ಲಿಯೇ ಬಂದಿದೆ. ಭಾಗವತವೆಂದೊಡನೆ ಜನ ಸಾಮಾನ್ಯವಾಗಿ ಶ್ರೀಕೃಷ್ಣಚರಿತ್ರೆಯನ್ನು ಸ್ಮರಿಸಿಕೊಳ್ಳುತ್ತಾರೆ. ಒಟ್ಟು ಭಾಗವತದಲ್ಲಿ ದಶಮಸ್ಕಂಧದಷ್ಟು ವಿಸ್ತಾರವಾದ ಸ್ಕಂಧವಾವುದೂ ಇಲ್ಲ. ಏಕಾದಶ ಸ್ಕಂಧದಲ್ಲಿ ಶ್ರೀಕೃಷ್ಣನ ನಿರ್ಯಾಣ ಕಥೆ ಬರುತ್ತದೆ. ಯಾದವರು ದುರಹಂಕಾರದಿಂದ ವರ್ತಿಸಿ ಋಷಿಶಾಪಕ್ಕೆ ಗುರಿಯಾಗಿ ಮದ್ಯಪಾನದಿಂದ ಮತ್ತರಾಗಿ ಅಂತಃಕಲಹದಿಂದ ಸತ್ತ ಕಥೆ, ಕೃಷ್ಣನು ವನದಲ್ಲಿ ಮಲಗಿದ್ದರೆ ಜರಸ್ ಎಂಬ ಬೇಟೆಗಾರನು ಅವನನ್ನು ಒಂದು ಜಿಂಕೆಯೆಂದು ಭ್ರಾಂತಿಪಟ್ಟು ಬಾಣಪ್ರಯೋಗಮಾಡಿ ಕೊಂದ ಕಥೆ, ಈ ಸ್ಕಂಧದಲ್ಲಿವೆ. ಭಾಗವತ ಧರ್ಮದ ವಿವರಣೆಯೂ ಪುರೂರವ ಊರ್ವಶಿಯರ ಕಥೆಯೂ ಬಂದಿವೆ. ಕೊನೆಯದಾದ ಹನ್ನೆರಡನೆಯ ಸ್ಕಂಧವು ಚಿಕ್ಕದು. ಅದರಲ್ಲಿ ಭವಿಷ್ಯನ್ನರಪಾಲರ ಕಥೆಯಿದೆ. ಈ ಭಾಗವತ ಕಥೆಯನ್ನೆಲ್ಲ ಶುಕಮಹರ್ಷಿಗಳ ಬಾಯಿಂದ ಕೇಳಿದ ಭಕ್ತನಾದ ಪರೀಕ್ಷಿತನಿಗೆ ಸದ್ಗತಿಯಾದ ಕಥೆ ಈ ಸ್ಕಂಧದಲ್ಲಿ ಬಂದಿದೆ.

ಭಾಗವತದ ವಸ್ತು ಬಹಳ ಪ್ರಾಚೀನವಾದದ್ದು. ಕ್ರಿಸ್ತಪೂರ್ವ ಹದಿನೈದು ಶತಮಾನಗಳ ಹಿಂದೆ ನಡೆದ ಕೃಷ್ಣಕಥೆ ಹತ್ತನೆಯ ಸ್ಕಂಧದಲ್ಲಿ ಬಂದಿದೆ. ಈ ಸ್ಕಂಧ ಅತ್ಯಂತ ಜನಪ್ರಿಯವಾಗಿದ್ದು ನಾಡಿನ ಹಲವು ಭಾಷೆಗಳಿಗೆ ಅನುವಾದವಾಗಿದೆ. ಭಾಗವತವನ್ನು ಬೋಪದೇವನೆಂಬ ಕ್ರಿ. ಶ. 13 ನೆಯ ಶತಮಾನದ ಕವಿಯು ರಚಿಸಿದನೆಂದು ಒಂದು ಹೇಳಿಕೆಯಿದೆ. ಆದರೆ ಬೋಪದೇವನು ಬರೆದದ್ದು ಭಾಗವತವನ್ನಲ್ಲ; ಭಾಗವತವನ್ನು ಕುರಿತ ಕೆಲವು ವ್ಯಾಖ್ಯಾನ ಗ್ರಂಥಗಳನ್ನು. "ಹರಿಲೀಲಾ" ಎಂಬ ವ್ಯಾಖ್ಯಾನ ಗ್ರಂಥಕ್ಕೆ ವ್ಯಾಖ್ಯಾನ ಬರೆದಿರುವ ಹೇಮಾದ್ರಿಯು ಭಾಗವತದಿಂದ ವ್ರತಖಂಡವನ್ನು ಕುರಿತು ಕೆಲವು ಭಾಗಗಳನ್ನು ಉದಾಹರಿಸುತ್ತಾನೆ. ಶ್ರೀಮನ್ಮಧ್ವಾಚಾರ್ಯರು (1199) "ಭಾಗವತ ತಾತ್ಪರ್ಯನಿರ್ಣಯ"

ವೆಂಬ ಗ್ರಂಥ ರಚಿಸಿದ್ದಾರೆ. ಅವರು ಹಲವರು ಭಾಗವತ ವ್ಯಾಖ್ಯಾನ ಕಾರರ ಹೆಸರುಗಳನ್ನು ಹೇಳುತ್ತ ಶ್ರೀಧರನನ್ನು ಸ್ಮರಿಸಿದ್ದಾರೆ. 'ಶ್ರೀಧರೀ' ಯಿಂದ ಕೆಲವು ವಾಕ್ಯಗಳನ್ನು ಹೇಮಾದ್ರಿಯು ವ್ಯಾಖ್ಯಾನದಲ್ಲಿ ಕಾಣ ಬಹುದು. ಹೀಗಾಗಿ ಕ್ರಿ. ಶ. 1260 ರಲ್ಲಿದ್ದ ಬೋಪದೇವನು ಭಾಗವತ ಕರ್ತನಲ್ಲವೆಂದೂ ಮಧ್ವಾಚಾರ್ಯರಿಗಿಂತ ಮುಂಚೆಯೇ ಗ್ರಂಥರಚನೆ ಮಾಡಿದ ಶ್ರೀಧರನ ಕಾಲಕ್ಕೇ ಭಾಗವತ ಪ್ರಸಿದ್ಧವಾಗಿದ್ದಿತೆಂದೂ ಸ್ಪಷ್ಟ ವಾಗುತ್ತದೆ.

ಹತ್ತನೆಯ ಶತಮಾನದಲ್ಲಿದ್ದ ಯಾಮುನ ಮುನಿಗಳು—ಶ್ರೀ ರಾಮಾನುಜಾಚಾರ್ಯರ ಗುರುಗಳು—ಭಾಗವತದ ಹೆಸರನ್ನು ಹೇಳಿರು ವುದರಿಂದಲೂ ಅವರಿಗಿಂತ ಮುಂಚೆ ಇದ್ದ ಕುಲಶೇಖರ ಆಳ್ವಾರರು ತಮ್ಮ "ಮುಕುಂದಮಾಲಾಸ್ತೋತ್ರ" ದಲ್ಲಿ "ಕಾಯೇನ ವಾಚಾಮನಸೇಂದ್ರಿ ಯೈರ್ವಾ" ಎಂದು ಆರಂಭವಾಗುವ ಭಾಗವತ ಶ್ಲೋಕವೊಂದನ್ನು ಸೇರಿ ಸಿರುವುದರಿಂದಲೂ ಹತ್ತನೆಯ ಶತಾಬ ಕ್ಕಿಂತ ಬಹಳ ಹಿಂದೆಯೇ ಭಾಗವತ ರಚಿತವಾಗಿದ್ದಿತೆಂಬುದು ಖಂಡಿತ.

ಭಾಗವತವು ಬಹಳ ಮಟ್ಟಿಗೆ ವಿಷ್ಣುಪುರಾಣವನ್ನು ಹೋಲುತ್ತದೆ. ಅದರ ಆರು ಅಂಶಗಳ ಕಥೆಯೇ ಇಲ್ಲಿ ಹನ್ನೆರಡು ಸ್ಕಂಧಗಳಾಗಿ ಬೆಳೆದಿದೆ. ವಿಷ್ಣುಪುರಾಣದ ಹಲವು ವಾಕ್ಯಗಳು ಭಾಗವತದಲ್ಲಿ ಉಂಡುಂಡೆಯಾಗಿ ಬಂದಿವೆ. ಆದ್ದರಿಂದ ಭಾಗವತಕಾರನಿಗೆ ವಿಷ್ಣು ಪುರಾಣ ಮುಖ್ಯವಾದ ಆಧಾರ. ಭಾಗವತ ವಿಷ್ಣುಪುರಾಣಕ್ಕಿಂತ ಈಚಿನದು.

## ಭಾಗವತಕಾರನು ದಕ್ಷಿಣ ದೇಶದವನೆ?

ಹನ್ನೊಂದನೆಯಸ್ಕಂಧದಲ್ಲಿ ಭಾಗವತಕಾರನು ತಾಮ್ರಪರ್ಣಿ ಮತ್ತು ಕಾವೇರಿಗಳ ಮಧ್ಯೆ ಇರುವ ದೇಶದಲ್ಲಿ ವೈಷ್ಣವ ಭಕ್ತರು ಬಹಳ ಹೆಚ್ಚುವ ರೆಂದು ಒಂದು ಭವಿಷ್ಯ ಹೇಳಿದ್ದಾನೆ. ಅಲ್ಲದೆ ಈ ಕವಿ ದಕ್ಷಿಣ ದೇಶದ ಸ್ಥಳಗಳ ಹೆಸರುಗಳನ್ನೆಲ್ಲ ಸರಿಯಾಗಿ ಹೇಳಿದ್ದಾನೆ. ವಿಷ್ಣುಪುರಾಣ

ದಲ್ಲಾಗಲಿ, ಮಿಕ್ಕಾವ ಪುರಾಣದಲ್ಲಾಗಲಿ, ಇಲ್ಲದ ಆದರೆ ದ್ರಾವಿಡ ಪ್ರಬಂಧಗಳಲ್ಲಿರುವ ಒಂದು ಕಥೆಯು ಭಾಗವತದಲ್ಲಿದೆ. ಶ್ರೀಕೃಷ್ಣನನ್ನು ಯಶೋದೆಯು ಹಗ್ಗದಿಂದ ಕಟ್ಟಿಹಾಕಲಾರದೆ ಹೋದಳೆಂದೂ ಕೊನೆಗೆ ಕೃಷ್ಣನೇ ಆಕೆಯಲ್ಲಿ ಅನುಗ್ರಹ ಬುದ್ಧಿಯಿಂದ ಕಟ್ಟಿಗೆ ಸಿಕ್ಕಿದನೆಂದೂ ಕಥೆ. ಇವೆಲ್ಲ ಕಾರಣಗಳಿಂದ ಭಾಗವತದ ರಚನೆಯಲ್ಲಿ ದಕ್ಷಿಣ ದೇಶದ ವೈಷ್ಣವ ಭಕ್ತರ ಪ್ರಭಾವವಿದೆಯೆಂದು ತೋರುತ್ತದೆ. ಭಾಗವತದಲ್ಲಿ ಜೈನ ಬೌದ್ಧ ಮತಗಳ ಹೋರಾಟ, ಶೈವಧರ್ಮದ ಹೋರಾಟ ಮುಂತಾದುವನ್ನೆಲ್ಲ ಹೇಳಿರುವುದರಿಂದಲೂ ದಕ್ಷಿಣ ದೇಶದಲ್ಲಿ ಇವೆಲ್ಲ ನಡೆದದ್ದರಿಂದಲೂ, ಕ್ರಿ. ಶ. 700 ರಿಂದ 900ರ ಮಧ್ಯಕಾಲದಲ್ಲಿ ವೈಷ್ಣವ ಆಳ್ವಾರರಲ್ಲಿ ಬಹು ಮಂದಿ ಹುಟ್ಟಿದರಾದ್ದರಿಂದಲೂ ಭಾಗವತವು ಈ ಸಮಯದಲ್ಲಿಯೇ ದಕ್ಷಿಣ ದೇಶದಲ್ಲಿಯೇ ರಚಿತವಾಗಿರಬಹುದೆಂದು ಒಂದು ಊಹೆಯಿದೆ.



# ಕನ್ನಡ ಭಾಗವತ

—o—

ಇಡೀ ಭಾಗವತವನ್ನು ಕನ್ನಡದಲ್ಲಿ ಬರೆಯಲು ನಿತ್ಯಾತ್ಮಶುಕ ಯೋಗಿಯೇ ಮೊದಲನೆಯವನು. ಆತನಿಗಿಂತ ಮುಂಚೆ ಕೃಷ್ಣನ ಕಥೆಯ ಒಂದು ಭಾಗವನ್ನು ಮಾತ್ರ ಆರಿಸಿಕೊಂಡು ರುದ್ರಭಟ್ಟನು ತನ್ನ 'ಜಗನ್ನಾಥ ವಿಜಯ' ವನ್ನು ಬರೆದನು. ಆದರಲ್ಲಿ ಬಾಣಾಸುರನ ಯುದ್ಧದವರೆಗಿನ ಕಥೆ ಮಾತ್ರ ಬರುತ್ತದೆ. ಅಲ್ಲದೆ ಭಾಗವತದ ಇತರ ಸ್ಕಂಧಗಳ ಕಥೆಯಂತೂ ಆದರಲ್ಲಿಲ್ಲ. ಉಳಿದುವು ಜೈನ ಸಂಪ್ರದಾಯಾನುಸಾರವಾದ ಕೃಷ್ಣಕಥೆಗಳು.

ಕನ್ನಡ - ಭಾಗವತಕರ್ತನ ನಿಜವಾದ ಹೆಸರು ನಿಷ್ಕರ್ಷೆಯಾಗಿ ತಿಳಿಯದು. 'ನಿತ್ಯಾತ್ಮಶುಕಯೋಗಿ' ಎಂಬುದು ಆತನ ಬಿರುದು ಅಥವಾ ಕಾವ್ಯನಾಮ. ಪ್ರತಿಸಂಧಿಯ ಕೊನೆಯಲ್ಲಿಯೂ 'ನಿತ್ಯಾತ್ಮ' ಎಂಬ ಅಂಕಿತವನ್ನು ಆತನು ಬಳಸಿದ್ದಾನೆ. ನಿತ್ಯಾತ್ಮ, ನಿತ್ಯಾತ್ಮ ಗೋಪೀನಾಥ, ನಿತ್ಯಾತ್ಮನಾರಾಯಣ, ನಿತ್ಯಾತ್ಮ ಪದ್ಮದೃಶ, ನಿತ್ಯಾತ್ಮ ಶಿವ ಎಂದು ಬೇರೆಬೇರೆ ಹೆಸರುಗಳನ್ನು ನಿತ್ಯಾತ್ಮ ಶಬ್ದದೊಂದಿಗೆ ಸೇರಿಸಿ ಅಂಕಿತವಾಗಿ ಬಳಸಿದ್ದಾನಾದ್ದರಿಂದ ಈ ಕವಿಯ ಅಂಕಿತ 'ನಿತ್ಯಾತ್ಮ' ಎಂದೇ ಇಟ್ಟುಕೊಳ್ಳಬೇಕು. ಭಾಗವತವನ್ನು ಶುಕಮಹರ್ಷಿಗಳು ಪರೀಕ್ಷಿತನಿಗೆ ಉಪದೇಶಿಸಿದರೆಂದು ನಂಬಿಕೆಯಿರುವುದರಿಂದ ಭಾಗವತವನ್ನು ಕನ್ನಡದಲ್ಲಿ ಬರೆದ ಈ ಕವಿಯು "ಶುಕ" ಶಬ್ದವನ್ನು ತನ್ನ ಬಿರುದಾಗಿ ಧರಿಸಿದನೆಂದು ತೋರುತ್ತದೆ. ವ್ಯಾಸರ ಮಹಾಭಾರತವನ್ನು ಕನ್ನಡದಲ್ಲಿ ಕಾವ್ಯವಾಗಿ ಬರೆದ ಗದುಗಿನ ನಾರಣಪ್ಪನು "ಕುಮಾರವ್ಯಾಸ" ನಾಗಿದ್ದುದು ಈ ಕವಿಗೆ ತಿಳಿದ ವಿಚಾರ.

"ಇದು ಸದಾನಂದಾಖ್ಯಯೋಗಿಯ ತೊದಲು ನುಡಿ",

"ಗೋಪೀನಾಥನು ಮಂಗಳವನೀವನು ಸದಾನಂದಾಖ್ಯಮುನಿವರಗೆ" "ಯೋಗೀಂದ್ರನಖಿಳೋದಿತ ಸದಾನಂದ ಮುದದೊಳಭಿವರ್ಣಿಸಿದಂ" ಎಂಬ ವಾಕ್ಯಗಳು ಕನ್ನಡ ಭಾಗವತದ ಬೇರೆಬೇರೆ ಭಾಗಗಳಲ್ಲಿ ದೊರೆಯು ವುವು. ಆದಕಾರಣ ಈ ಕವಿಯ ಹೆಸರು ಸದಾನಂದ ನೆಂದಿರಬಹುದೆ? ಯೋಗಿ, ಯೋಗೀಂದ್ರ, ಎಂದು ಹೇಳಿಕೊಳ್ಳುವುದರಿಂದ ಈತನು ಸನ್ಯಾಸಿ ಯಿದ್ದರೂ ಇರಬಹುದು. ಅಚ್ಯುತಾರಣ್ಯನೆಂಬ ಯತಿಯನ್ನು ಬಹಳವಾಗಿ ಹೊಗಳಿ ಆತನ ಪ್ರೇರಣೆಯಿಂದ ಭಾಗವತವನ್ನು ಬರೆದಂತೆ ಹೇಳಿಕೊಂಡಿರುವು ದರಿಂದ ಕವಿಗೆ ಅಚ್ಯುತಾರಣ್ಯರೆಂಬ ಯತಿಗಳು ಗುರುಗಳಾಗಿರಬಹುದು.

ಭಾಗವತಕಾರನು ಕುಮಾರವ್ಯಾಸನ ಭಾರತದಲ್ಲಿ ಬಿಟ್ಟುಹೋಗಿದ್ದ ಪೌಲೋಮ ಮತ್ತು ಆಸ್ತೀಕಪರ್ವಗಳ ಕಥೆಯನ್ನು ಪದ್ಯಕಾವ್ಯವಾಗಿ ಬರೆದಿರುವನಾದ್ದರಿಂದ ಕುಮಾರವ್ಯಾಸನಿಗಿಂತ ಎಂದರೆ, ಕ್ರಿ. ಶ. 1430 ಕ್ಕಿಂತ ಈಚಿನವನಾಗಿರಬೇಕು. ಹನ್ನೆರಡು ಸಾವಿರಕ್ಕಿಂತ ಹೆಚ್ಚಿನ ಪದ್ಯಗಳನ್ನೊಳಗೊಂಡ ಈ ದೊಡ್ಡಕಾವ್ಯದ ಹೆಸರನ್ನು ಬೇರೆ ಯಾವ ಕವಿಯೂ ಹೇಳದೆ ಬಿಟ್ಟಿರುವುದು ಆಶ್ಚರ್ಯವೇ ಸರಿ. ಭಾಗವತಕಾರನೂ ತನಗಿಂತ ಹಿಂದಿನ ಯಾವ ಕನ್ನಡ ಕವಿಯನ್ನೂ ಹೆಸರಿಸಿಲ್ಲ ಆದ್ದರಿಂದ ಈತನ ಕಾಲನಿರ್ಣಯಕ್ಕೆ ಬೇರೆ ಪ್ರಮಾಣಗಳೇ ಬೇಕು.

ಮದರಾಸಿನ ಪ್ರಾಚ್ಯಕೋಶಾಗಾರದ 169 ನೆಯ ನಂಬರು ತಾಳೆ ಗರಿಯ ಪುಸ್ತಕದ ಕೊನೆಯಲ್ಲಿ ಈ ಪದ್ಯವಿದೆ:—

ಶಾಲಿವಾಹನಶಕ ಸಹಸ್ರದ
ಮೇಲೆ ನಾನುಜ್ಞಾಲ್ವತ್ತೊಂದಜ
ಕಾಲದೊಳಗಾಶ್ವೀಜ ಮಾಸದೊಳಸಿತಪಕ್ಷದೊಳು
ಶೀಲಪಂಚಮಿ ದಿವಸ ಯದುಕುಲ
ಪಾಲಕನ ಭಾಗವತ ಕಥೆಯನು
ಲೀಲೆಯಿಂ ರಾಮಂಣನಿಗೆ ರಘುನಾಥನುರೆ ಬರೆದ ॥

ರಾಮಣ್ಣನೆಂಬವನಿಗಾಗಿ ರಘುನಾಥನೆಂಬ ಲಿಪಿಕಾರನು ಶಕ 1441ರಲ್ಲಿ

ಈ ಪುಸ್ತಕವನ್ನು ಬರೆದು ಕೊಟ್ಟನೆಂದು ಇದರಿಂದ ಅರ್ಥವಾಗುತ್ತದೆ. ಅಂದರೆ ಕ್ರಿ.ಶ. 1519ರಲ್ಲಿ ಈ ಪುಸ್ತಕ ಸಿದ್ಧವಾಯಿತು. ನಕಲು ಮಾಡಿದುದೇ 1519 ಆದರೆ ಅದನ್ನು ಕವಿನಿತ್ಯಾತ್ಮಶುಕನು ಇನ್ನೂ ಮುಂಚೆಯೇ ರಚಿಸಿರಬೇಕು. ಕ್ರಿಸ್ತಶಕ 1430ಕ್ಕಿಂತ ಈಚೆ, ಸುಮಾರು 1500ಕ್ಕಿಂತ ಹಿಂದೆ, ನಿತ್ಯಾತ್ಮ ಶುಕನು ಭಾಗವತವನ್ನು ಬರೆದನೆಂದು ತಿಳಿಯಬಹುದು.

ಕನ್ನಡ ಭಾಗವತದ ಹನ್ನೊಂದು, ಹನ್ನೆರಡನೆಯ ಸ್ಕಂಧಗಳ ಕೊನೆಯಲ್ಲಿ ಚಾಟುವಿಠಲನೆಂಬವನು ಭಾಗವತವನ್ನು ಬರೆದನೆಂದು ಹೇಳಿದೆ. 'ಚಾರುವಿಠಲ'ನೆಂದೂ ಪಾಠವಿದೆ. ಭಾಗವತದ ಬೇರಾವ ಭಾಗದಲ್ಲಿಯೂ ಈ ಹೆಸರನ್ನು ಕಾಣಲಾರೆವು. ಸದಾನಂದ ಯೋಗಿಗೇ ಚಾಟುವಿಠಲನೆಂಬ ಬಿರುದಿದ್ದಿತೋ ಅಥವಾ ಕೊನೆಯ ಎರಡು ಸ್ಕಂಧಗಳನ್ನು ಚಾಟುವಿಠಲನೆಂಬ ಬೇರೊಬ್ಬ ಕವಿಯೇ ಬರೆದನೋ ತಿಳಿಯದು. ಆದರೆ ಈ ಸ್ಕಂಧಗಳಲ್ಲಿಯೂ ಅಚ್ಯುತಾರಣ್ಯಯತಿಯ ಸ್ತೋತ್ರವಿದೆ. ಹನ್ನೊಂದನೆಯ ಸ್ಕಂಧದ 36ನೆಯ ಸಂಧಿಯ 99ನೆಯ ಪದ್ಯದಲ್ಲಿ ಸದಾನಂದಾಖ್ಯ ಮುನಿವರನ ಹೆಸರೂ ಬಂದಿದೆ. ಆದ್ದರಿಂದ ಅಚ್ಯುತಾರಣ್ಯ ಶಿಷ್ಯನಾದ ಸದಾನಂದನೇ ಭಾಗವತವನ್ನು ಪೂರ್ಣಮಾಡುವ ವೇಳೆಗೆ ಚಾಟುವಿಠಲನೆಂಬ ಬಿರುದನ್ನು ಪಡೆದಿರಬಹುದೆಂದು ಊಹಿಸಬೇಕು.

ಸದಾನಂದಾಖ್ಯಮುನಿ, ನಿತ್ಯಾತ ಶುಕಯೋಗಿ, ಎಂದು ಮೊದಲಾಗಿ ಹೇಳಿಕೊಂಡಿರುವುದರಿಂದ ಭಾಗವತಕರ್ತನು ಯತಿಯಿರಬಹುದು. ಅಚ್ಯುತಾರಣ್ಯಯತಿವರರ ಪ್ರೇರಣೆಯಂತೆ, ಅವರ ಅನುಗ್ರಹ, ಆಶೀರ್ವಾದಗಳಿಂದ ಭಾಗವತವನ್ನು ಬರೆದುದಾಗಿ ಕವಿಯೇ ಹೇಳಿಕೊಂಡಿದ್ದಾನೆ. ಕವಿ, ಕವಿಯ ಉಪದೇಶಕ, ಇಬ್ಬರೂ ಯತಿಗಳು. ಅವರಿಗೆ ಧರ್ಮ ಪ್ರಚಾರವಲ್ಲದೆ ಬೇರಾವ ಉದ್ದೇಶ ತಾನೆ ಇರಬಹುದು? "ಭಾಗವತದರ್ಥವ ಸಂಗ್ರಹವಾಗಿ ಬಲ್ಲಂದದಲಿ" ಹೇಳುವುದಾಗಿ ಪ್ರತಿಜ್ಞೆ ಮಾಡಿ ಕವಿಯು ಗ್ರಂಥವನ್ನು ಆರಂಭಿಸಿದ್ದಾನೆ. ಹರಿಗುಣಸ್ತುತಿ, ಹರಿ

ಪಾದಭಕ್ತರ ಚಾರಿತ್ರಕಥನ, ಭಕ್ತಿಸಾಧನಮಾರ್ಗ ನಿರೂಪಣೆ, ಇವು ಭಾಗವತಕಾರನ ಧ್ಯೇಯುಗಳು. ಈ ಧ್ಯೇಯ ಸಾಧನೆಗೆ ತಕ್ಕ ವಸ್ತುವನ್ನೇ ಕವಿ ಆರಿಸಿಕೊಂಡಿದ್ದಾನೆ. ಅನೇಕ ಭಗವದ್ಭಕ್ತರು ತಮ್ಮ ಭಕ್ತ್ಯತಿಶಯ ದಿಂದ ಭಗವಂತನನ್ನು ಒಲಿಸಿಕೊಂಡ ಕಥೆಯಿಂದ ಕೂಡಿದ ಈ ಗ್ರಂಥದಲ್ಲಿ ಭಾಗವತ ಧರ್ಮದ ವರ್ಣನೆ ವಿಸ್ತಾರವಾಗಿದೆ.

ಕವಿಗೆ ಧರ್ಮವೇ ಪ್ರೇರಕಶಕ್ತಿ. ಕಾವ್ಯವಸ್ತು ಭಾಗವತದ ಪುರಾಣ ಕಥೆ. ಹೀಗೆ ಧರ್ಮ ನಿರೂಪಣೆಯೇ ನಮ್ಮ ಕವಿಗೆ ಪರಮಪ್ರಧಾನವಾಗಿ ದ್ದರೂ ಈತನ ಕೃತಿಯಲ್ಲಿ ಕಾವ್ಯಗುಣ ಕಡಿಮೆಯಾಗಿಲ್ಲ. ನಿತ್ಯಾತ್ಮಶುಕನು ಕುಮಾರವ್ಯಾಸನ ಶೈಲಿಯನ್ನು ಆದರ್ಶವಾಗಿಟ್ಟುಕೊಂಡು ಬರೆದಹಾಗೆ ತೋರುತ್ತದೆ. ಭಾಮಿನಿಷಟ್ಪದಿ ಕವಿಗೆ ಒಲಿದಿದೆ. ಎಲ್ಲಿಯೂ ಕುಂಟದ ಪದ್ಯರಚನೆ ನಿತ್ಯಾತ್ಮಶುಕನ ಸ್ವತ್ತು. "ಹಲಗೆ ಬಳಪವಪಿಡಿಯದ ಅಗ್ಗಳಿಕೆ" ಕುಮಾರ ವ್ಯಾಸನಿಗೆ ಮಾತ್ರವಲ್ಲದೆ ನಿತ್ಯಾತ್ಮಶುಕನಿಗೂ ಸಲ್ಲುತ್ತದೆ. ಈ ಕವಿಯ ಸರಳಭಾಷೆ, ಸುಂದರ ಉಪಮಾನಗಳು, ರಮ್ಯವೂ ಸಮಯೋಚಿತವೂ ಆದ ವರ್ಣನೆಗಳು, ಭಕ್ತರಾದ ಓದುಗರ ಚಿತ್ತಾಪಹಾರಿಗಳಾಗಿವೆ. ಶ್ರೀಕೃಷ್ಣ ಚರಿತೆಯನ್ನೊಳಗೊಂಡ ದಶಮಸ್ಕಂಧ ವಂತೂ ಬಹಳ ರಮ್ಯವಾಗಿದೆ.

——*——

# ಶ್ರೀ ಕೃಷ್ಣನ ಕಾಲ

ಶ್ರೀ ಕೃಷ್ಣನ ಪೂಜೆಯು ಭರತಖಂಡದಲ್ಲಿ ಬಹಳ ಪ್ರಾಚೀನ ಕಾಲದಲ್ಲಿಯೇ ಬಳಕೆಯಲ್ಲಿದ್ದಿತು. ಬುದ್ಧನ ಅವತಾರಕ್ಕಿಂತ ಮೊದಲೇ ಕೃಷ್ಣನ ಪೂಜೆ ನಡೆದಿತ್ತು. ಕ್ರಿಸ್ತಪೂರ್ವ ೩೫೦ರ ವೇಳೆಯಲ್ಲಿ ಜೀವಿಸಿದ್ದ ಪಾಣಿನಿಯು ವಾಸುದೇವಾರ್ಜುನರನ್ನು ಬಹಳ ಪೂಜಾರ್ಹರೆಂದು ಭಾವಿಸಿದ್ದನೆಂದು ತಿಳಿಯುತ್ತದೆ. ಪಾಣಿನಿಯ ಗ್ರಂಥಕ್ಕೆ ವ್ಯಾಖ್ಯಾನ ಮಾಡುತ್ತ ಪತಂಜಲಿಯು ವಾಸುದೇವನು ದೇವರೆಂದೇ ಹೇಳಿದ್ದಾನೆ. ಪತಂಜಲಿಯ ಕಾಲಕ್ಕಾಗಲೇ ಕಂಸವಧೆ ಬಲಿಬಂಧಗಳ ಕಥೆಗಳು ಬಳಕೆಯಲ್ಲಿದ್ದುವೆಂದೂ ಅವುಗಳನ್ನೂ ರಂಗಭೂಮಿಯ ಮೇಲೆ ಅಭಿನಯಿಸುತ್ತಿದ್ದರೆಂದೂ ಮಹಾಭಾಷ್ಯದ ಕೆಲವು ಮಾತುಗಳಿಂದ ಊಹಿಸಲಾಗಿದೆ.

ಮಹಾವೀರನೆಂಬ ಜೈನತೀರ್ಥಂಕರ ಚರಿತ್ರೆಯನ್ನು ಹೇಳುವಾಗ ಶ್ವೇತಾಂಬರ ಜೈನರು ದೇವಾನಂದಳ ಗರ್ಭದಲ್ಲಿದ್ದ ಶಿಶುವನ್ನು ತ್ರಿಶಲೆಯೆಂಬ ಇನ್ನೊಬ್ಬ ಹೆಂಗಸಿನ ಗರ್ಭಕ್ಕೆ ಸಾಗಿಸಿದ ಕಥೆಯನ್ನು ಹೇಳುತ್ತಾರೆ. ಈ ಗರ್ಭವ್ಯತ್ಯಾಸ ಕಥೆಯು ಕೃಷ್ಣಕಥೆಯ ಅನುಕರಣವೆಂದು ಹಲವರ ಊಹೆ. ಜೈನ ಪುರಾಣಗಳಲ್ಲಿ ಒಂಬತ್ತು ಮಂದಿ ವಾಸುದೇವರು, ಒಂಬತ್ತು ಮಂದಿ ಪ್ರತಿ ವಾಸುದೇವರು, ಒಂಬತ್ತು ಮಂದಿ ಬಲದೇವರುಗಳು, ಇದ್ದರೆಂದು ಹೇಳುವುದನ್ನು ಗಮನಿಸಿದರೆ ಇದೆಲ್ಲ ಭಾಗವತ ಕೃಷ್ಣಚರಿತ್ರೆಯ ಅನುಕರಣವಿರಬಹುದೆಂಬ ಊಹೆ ಬಲವಾಗುತ್ತದೆ. ಈ ಊಹೆ ಸರಿಯಾದರೆ ಕೃಷ್ಣಾವತಾರ ಕಥೆಯು ಜೈನ ಧರ್ಮದ ಪ್ರಚಾರವಾಗುವುದಕ್ಕಿಂತ ಬಹಳ ಮುಂಚೆಯೇ ಪ್ರಸಿದ್ಧವಾಗಿದ್ದಿತೆಂದು ಊಹಿಸಬಹುದು.

ರಾಜಪುತ್ರಸ್ಥಾನದ ಘೋಸುಂಡಿ ಎಂಬಲ್ಲಿ ದೊರೆತ ಒಂದು ಶಾಸನದಲ್ಲಿ ಸಂಕರ್ಷಣ ವಾಸುದೇವರ ಪೂಜಾಮಂದಿರದ ಸುತ್ತ ಒಂದು ಪ್ರಾಕಾರ

ವನ್ನು ನಿರ್ಮಿಸಿದ ಸಂಗತಿ ಹೇಳಿದೆ. ಈ ಶಾಸನವು ಕ್ರಿ. ಪೂ. ೨೦೦ರ ವೇಳೆಗೇ ರಚಿತವಾದುದೆಂದು ಅದರ ಲಿಪಿಯ ಸ್ವರೂಪ ಹೇಳುತ್ತದೆ. ಬೆಸನಗರದ ಒಂದು ಶಾಸನದಲ್ಲಿ–ಇದೂ ಕ್ರಿ. ಪೂ. ಎರಡನೆಯ ಶತಮಾನಕ್ಕೆ ಸೇರಿದ್ದು —ಭಾಗವತ ಹೆಲಿಯೋಡೋರನು ದೇವದೇವನಾದ ವಾಸುದೇವನ ಪೂಜಾ ಮಂದಿರದ ಎದುರುಗಡೆ ಗರುಡ ಧ್ವಜ (ಸ್ತಂಭ) ವನ್ನು ಮಾಡಿಸಿದನೆಂದು ಹೇಳಿದೆ. ಇಲ್ಲಿ ಹೆಲಿಯೊಡೋರನೆಂಬ ಗ್ರೀಕನು ತಾನು 'ಭಾಗವತ'ನೆಂದು ಹೇಳಿಕೊಂಡಿರುವುದರಿಂದ ಅನ್ಯದೇಶಿಯರೂ ಈ ಮತಕ್ಕೆ ಸೇರಬಹುದಾಗಿದ್ದಿತೆಂದೂ ಭಾಗವತರೆಂಬ ಒಂದು ಭಕ್ತ ಪಂಥವು ಏರ್ಪಟ್ಟಿದ್ದಿತೆಂದೂ ತಿಳಿಯುತ್ತದೆ. ನಾನಾಘಾಟ್ ಎಂಬಲ್ಲಿನ ಗುಹೆಯೊಂದರಲ್ಲಿ ದೊರೆತ ಒಂದು ಶಾಸನದ ಮಂಗಳ ಶ್ಲೋಕದಲ್ಲಿ ಸಂಕರ್ಷಣ ಮತ್ತು ವಾಸುದೇವ ಎಂಬ ಎರಡು ಹೆಸರುಗಳೂ ಇತರ ದೇವರುಗಳ ಹೆಸರುಗಳೊಡನೆ ದ್ವಂದ್ವಸಮಾಸದಲ್ಲಿ ಬಂದಿವೆ. ಈ ಶಾಸನವೂ ಕ್ರಿ. ಪೂ. ಮೊದಲನೆಯ ಶತಮಾನಕ್ಕೇ ಸೇರಿದ್ದು.

ಅಂತು, ವಾಸುದೇವಕೃಷ್ಣನ ಪೂಜೆಯು ಬಹಳ ಹಿಂದೆಯೇ, ಎಂದರೆ, ಕ್ರಿಸ್ತಜನನಕ್ಕೆ ಹಲವು ಶತಮಾನಗಳ ಮುಂಚೆಯೇ, ಆರಂಭವಾಗಿದ್ದಿತೆಂದು ಸ್ಪಷ್ಟವಾಗುತ್ತದೆ. ಮತ್ಸ್ಯ, ವಾಯು, ವಿಷ್ಣು ಮತ್ತು ಭಾಗವತ ಪುರಾಣಗಳಲ್ಲೆಲ್ಲ ಈ ಮುಂದಿನ ಶ್ಲೋಕ ಸಿಕ್ಕುತ್ತದೆ:—

ಯಾವತ್ ಪರೀಕ್ಷಿತೋ ಜನ್ಮ ಯಾವನ್ನಂದಾಭಿಷೇಚನಮ್
ಏವಂ ವರ್ಷಸಹಸ್ರಂತು ಜ್ಞೇಯಂ ಪಂಚದಶೋತ್ತರಮ್.

(ಪರೀಕ್ಷಿತನ ಜನ್ಮಕಾಲದಿಂದ ನಂದನ ರಾಜ್ಯಾಭಿಷೇಚನದವರೆಗೆ ೧೦೧೫ ವರ್ಷಗಳು ಕಳೆದುವು) ನಂದನು ಕ್ರಿ. ಪೂ. ೩೪೭ ರಲ್ಲಿ ರಾಜ್ಯಕ್ಕೆ ಬಂದನು. ಆದ್ದರಿಂದ ಪರೀಕ್ಷಿತನು ಬಹುಶಃ ಕ್ರಿ. ಪೂ. ೧೪೫೮ ರಲ್ಲಿ ಜನಿಸಿರಬೇಕು. ಅದಕ್ಕೆ ಕೆಲವು ವರ್ಷಗಳ ಮುಂಚೆಯೇ ಮಹಾಭಾರತದ ಯುದ್ಧ ನಡೆದು ಹೋಗಿರಬೇಕು. ಕೃಷ್ಣನು ಮಹಾಭಾರತಯುದ್ಧದ ಕಾಲದಲ್ಲಿದ್ದನಾದ್ದರಿಂದ ಕ್ರಿಸ್ತಪೂರ್ವ ಹದಿನೈದನೆಯ ಶತಮಾನ ಕೃಷ್ಣನಕಾಲವೆಂದು ನಂಬಬಹುದು.

# ಶ್ರೀಕೃಷ್ಣ ಕಥೆಯ ಬೆಳೆವಣಿಗೆ

ಶ್ರೀಕೃಷ್ಣನು ದೇವರೆಂದೂ ದೇವರದೇವನೆಂದೂ ಪರಿಗಣಿತನಾಗಿ ಲೋಕದಲ್ಲಿ ಪೂಜೆಯನ್ನು ಹೊಂದುತ್ತಿದ್ದಾನೆ. ಅವನು ಮಹಾವಿಷ್ಣುವಿನ ಅವತಾರವೆಂದೇ ಭಕ್ತರ ನಂಬಿಕೆ. ಶ್ರೀರಾಮಾದಿಗಳು ವಿಷ್ಣುವಿನ ಅಂಶಾವತಾರರಾದರೆ ಶ್ರೀಕೃಷ್ಣನು ಮಹಾವಿಷ್ಣುವಿನ ಪೂರ್ಣಾವತಾರ! ಆತನ ಚರಿತ್ರೆಯನ್ನು ವಿಸ್ತಾರವಾಗಿ ವರ್ಣಿಸಿರುವ ಮಹಾಭಾರತ, ವಿಷ್ಣುಪುರಾಣ, ಹರಿವಂಶ, ಮೊದಲಾದ ಗ್ರಂಥಗಳಲ್ಲೆಲ್ಲ ಹಾಗೆಂದು ಹೇಳಿದೆ. "ಯಸ್ತು ನಾರಾಯಣೋನಾಮ ದೇವದೇವಃ ಸನಾತನಃ ತಸ್ಯಾಂಶೋ ಮಾನುಷೇಷ್ವಾಸೀತ್ ' ವಾಸುದೇವಃ ಪ್ರತಾಪವಾನ್" "ಸಏಷ ಭಗವಾನ್ ವಿಷ್ಣುಃ ಕೃಷ್ಣೇತಿ ಪರಿಕೀರ್ತ್ಯತೇ" "ಸಸ್ರಷ್ಟಾ ಜಗತಃಕೃಷ್ಣಃ" ಎಂಬಿವೇ ಮೊದಲಾದ ಮಾತುಗಳನ್ನು ಮಹಾಭಾರತದಲ್ಲಿ ಕಾಣಬಹುದು.

ಆದರೆ ಶ್ರೀಕೃಷ್ಣನೇ ತಾನು ದೇವರಲ್ಲವೆಂದೂ ತಾನು ಯಾವ ದೈವೀಕೃತ್ಯವನ್ನೂ ಮಾಡಲಿಲ್ಲವೆಂದೂ ಪುರುಷಕಾರದಿಂದ ಮಾಡಬಹುದಾದಷ್ಟನ್ನೇ ಮಾಡಿದನೆಂದೂ ಹೇಳಿದ್ದಾನೆ.

"ಅಹಂಹಿತತ್ಕರಿಷ್ಯಾಮಿಪರಂ ಪುರುಷಕಾರತಃ
ದೈವಂತು ನಮಯಾಶಕ್ಯಂ ಕರ್ಮಕರ್ತುಂಕಥಂಚನ"

ಅಲ್ಲದೆ ಶ್ರೀಕೃಷ್ಣನ ಹಲವು ಆಯುಧಗಳು ದೇವತೆಗಳ ಅನುಗ್ರಹದಿಂದ ಲಭಿಸಿದುವು. ವರುಣ ಮತ್ತು ಪಾವಕರಿಂದ ಅವನು ಗದೆ ಮತ್ತು ಚಕ್ರಾಯುಧಗಳನ್ನು ಪಡೆದನು. ನರಕಾಸುರನನ್ನು ಕೊಂದುದರಿಂದ ಕೃಷ್ಣನಿಗೆ ಅದಿತಿಯ ಕರ್ಣಕುಂಡಲಗಳು ಲಭಿಸಿದುವು. ಇವನ್ನೆಲ್ಲ ಪಡೆದ ಮೇಲೆಯೇ ಕೃಷ್ಣನು ದಾನವರನ್ನು ನಿಗ್ರಹಿಸಬಲ್ಲವನಾದನು.

ಧರ್ಮರಾಯನು ರಾಜಸೂಯ ಯಾಗಮಾಡಿ ಅಗ್ರಪೂಜೆಯನ್ನು ಶ್ರೀಕೃಷ್ಣನಿಗೆ ಸಲ್ಲಿಸಲು ಸಂಕಲ್ಪಿಸಿದಾಗ ಚೇದಿದೇಶದ ಅರಸನಾದ ಶಿಶುಪಾಲನು ಶ್ರೀಕೃಷ್ಣನನ್ನು ಬಹಳವಾಗಿ ನಿಂದಿಸಿದನು. ಪಾಂಡವದೂತನಾಗಿ ತನ್ನ ಸಭೆಗೆ ಬಂದ ಶ್ರೀಕೃಷ್ಣನನ್ನು ದುರ್ಯೋಧನ ಮಹಾರಾಜನು ಕಟ್ಟಿಹಾಕಲು ಪ್ರಯತ್ನಿಸಿದನು. ಪೌಂಡ್ರಕ ವಾಸುದೇವನು ಶ್ರೀಕೃಷ್ಣನು ಅವತಾರಪುರುಷನೆಂಬುದನ್ನು ಒಪ್ಪದೆ ಅವನೊಡನೆ ಯುದ್ಧ ಹೂಡಿದನು.

ಜರಾಸಂಧನು ಹಲವು ಸಲ ಮಧುರಾನಗರಕ್ಕೆ ಮುತ್ತಿಗೆ ಹಾಕಲು ಶ್ರೀಕೃಷ್ಣನು ಅಂಜಿಕೆಯಿಂದ ಮಧುರೆಯನ್ನು ತ್ಯಜಿಸಿ ಓಡಿಹೋಗಿ ಸಮುದ್ರತೀರದಲ್ಲಿ ದ್ವಾರಕೆಯನ್ನು ನಿರ್ಮಿಸಿಕೊಂಡನು. ಹೀಗೆ ಭಾರತದಲ್ಲಿಯೇ ಶ್ರೀಕೃಷ್ಣನ ದೇವಮಾನುಷ ಕಥೆಗಳೆರಡೂ ಜತೆಜತೆಯಾಗಿ ಬರುತ್ತವೆ. ಅವನ ಜೀವಿತಕಾಲದಲ್ಲಿಯೇ ಕೃಷ್ಣನ ದೇವಕಥೆಯ ವಿಚಾರದಲ್ಲಿ ಭಿನ್ನಾಭಿಪ್ರಾಯಗಳಿದ್ದಂತೆ ತೋರುತ್ತದೆ. ಪಾಂಡವರಿಗೂ ಭೀಷ್ಮ ದ್ರೋಣ ವಿದುರಾದಿಗಳಿಗೂ ಅವನು ಭಗವದಂಶ ಸಂಭೂತನಾದ ಮಹಾಪುರುಷನಾಗಿ ತೋರಿದರೆ ಶಿಶುಪಾಲ ದುರ್ಯೋಧನಾದಿಗಳಿಗೆ ಅವನು 'ಗೋಪಾಲಕ' ನಾಗಿ ಕಂಡನು. ಆದರೆ ದುರ್ಯೋಧನಾದಿ ದುರ್ಜನರ ಅಭಿಪ್ರಾಯ ಮಾನ್ಯವಲ್ಲವಾದ್ದರಿಂದ ನಮ್ಮವರಿಗೆ ಶ್ರೀಕೃಷ್ಣನ ದೇವತ್ವದ ವಿಚಾರದಲ್ಲಿ ಯಾವಾಗಲೂ ಸಂಶಯ ತೋರಲಿಲ್ಲ. ಆದರೆ ಹತ್ತೊಂಬತ್ತನೆಯ ಶತಮಾನದಿಂದೀಚೆಗೆ ಪಾಶ್ಚಾತ್ಯ ವಿದ್ವಾಂಸರು ಸಂಸ್ಕೃತ ಭಾಷಾಸಾಹಿತ್ಯಗಳ ಅಭ್ಯಾಸಮಾಡಿ ಶ್ರೀಕೃಷ್ಣನ ಐತಿಹಾಸಿಕತೆಯನ್ನು ಕುರಿತು ಚರ್ಚಿಸತೊಡಗಿದಮೇಲೆ ಭಾರತ ಮತ್ತು ಪುರಾಣಗಳಲ್ಲಿರುವ ವಿಸ್ತಾರವಾದ ಕೃಷ್ಣಕಥೆಯಲ್ಲಿ ಸತ್ಯವಾವುದು, ಮಿಥ್ಯೆಯಾವುದು, ಎಂಬ ವಿವೇಚನೆಗೆ ಆರಂಭವಾಯಿತು. ಮೂಲ ಭಾರತದಲ್ಲಿ ಶ್ರೀಕೃಷ್ಣನು ಮಾನವಮಾತ್ರನೆಂದೂ ಆಮೇಲಾಮೇಲೆ ಅವನಿಗೆ ದೈವತ್ವದ ಗೌರವ ವುಂಟಾಯಿತೆಂದೂ ಹಲವರು ವಿದ್ವಾಂಸರು ಭಾವಿಸಿದರು. ಆದರೆ ಮೂಲ ಭಾರತ ಯಾವುದು, ಆಮೇಲೆ ಆದಕ್ಕೆ ಸೇರಿಕೊಂಡ ಭಾಗಗಳು

ಯಾವುವು, ಯಾವಾಗ ಸೇರಿದುವು ಎಂಬ ಪ್ರಶ್ನೆಗಳಿಗೆ ವಿವಾದಕ್ಕೆಡೆಯಿಲ್ಲದ ಉತ್ತರ ಕೊಡುವುದು ಸುಲಭವಲ್ಲ.

ಮಹಾಭಾರತಕ್ಕಿಂತ ಮುಂಚೆ ಕೃಷ್ಣನ ಪ್ರಸ್ತಾಪಬರುತ್ತದೆ ಯಾದರೂ ಅದು ಬಹಳ ಸ್ವಲ್ಪ. ಛಾಂದೋಗ್ಯೋಪನಿಷತ್ತಿನಲ್ಲಿ ಕೃಷ್ಣನು ಘೋರ ಆಂಗಿರಸನೆಂಬ ಗುರುವಿನ ಸನ್ನಿಧಿಯಲ್ಲಿ ಒಂದು ರಹಸ್ಯ ವಿದ್ಯೆಯನ್ನು ಕಲಿತನೆಂದು ಹೇಳಿದೆ. ಋಗ್ವೇದದಲ್ಲಿಯೂ ಒಬ್ಬ ಮಂತ್ರದ್ರಷ್ಟನಾದ ಕೃಷ್ಣನ ಪ್ರಸ್ತಾಪವಿದೆ. ಈ ಎರಡು ಕಡೆಗಳಲ್ಲಿಯೂ ಕೃಷ್ಣನು ಮಾನವ ನೆಂಬ ಕಲ್ಪನೆಯಿದೆಯೇ ಹೊರತು ದೇವನೆಂಬ ಭಾವನೆಯಿಲ್ಲ. ಆದರೆ ವೇದಯುಗದ ಕೊನೆಯ ದಿನಗಳಲ್ಲಿ ರಚಿತವಾದುದೆಂದು ಹೇಳಲಾದ ನಾರಾಯಣಾಥರ್ವಶಿರಸೋಪನಿಷತ್ತಿನಲ್ಲಿಯೂ ಆತ್ಮಬೋಧೋಪನಿಷತ್ತಿ ನಲ್ಲಿಯೂ ಕೃಷ್ಣನು ಮಧುಸೂದನನಂತೆಯೇ 'ಬ್ರಹ್ಮಣ್ಯ' ನೆಂದು ಹೇಳಿದೆ. ಇಲ್ಲಿ ಬ್ರಹ್ಮಣ್ಯ ಶಬ್ದಕ್ಕೆ ಅರ್ಥವೇನೇ ಇದ್ದರೂ ಕೃಷ್ಣನು ಮಧುಸೂದನನಿಗೆ ಸಮಾನನೆಂಬ ಅರ್ಥ ತೋರುತ್ತದೆ. ಆದ್ದರಿಂದ ವೇದಯುಗದ ಕಡೆ ಯಲ್ಲಿ ಕೃಷ್ಣನಿಗೆ ದೇವತ್ವದ ಗಣನೆ ಬಂದಿತೆಂದು ಊಹಿಸಲಾಗಿದೆ.

ವೇದೋಪನಿಷತ್ತುಗಳ ಕೃಷ್ಣನೂ ಭಾರತದ ಕೃಷ್ಣನೂ ಬೇರೆ ಬೇರೆಯವರೆಂದೂ ಮಹಾಭಾರತದ ಕೃಷ್ಣನು ಅಧರ್ಮಿಗಳಾದ ಅನೇಕ ರಾಕ್ಷಸರನ್ನೂ ದುಷ್ಟ ಕ್ಷತ್ರಿಯರನ್ನೂ ಕೊಂದು ಲೋಕಸಂರಕ್ಷಣೆ ಮಾಡಿದ ಧರ್ಮಸಂಸ್ಥಾಪಕನೇ ಹೊರತು ಉಪನಿಷತ್ಕೃಷ್ಣನಂತೆ ಮತಾಚಾರ್ಯನಲ್ಲ ವೆಂದೂ ಕೆಲವರು ವಾದಿಸುತ್ತಾರೆ. ಆದರೆ ಮಹಾಭಾರತದ ಕೃಷ್ಣನು ಮತಾಚಾರ್ಯನಲ್ಲವೆಂದು ಹೇಳುವುದು ಸಮನಲ್ಲ. ಅವನು ಅರ್ಜುನ ನಿಗೆ ಸಮರಾಂಗಣದಲ್ಲಿ ಕರ್ತವ್ಯೋಪದೇಶ ಮಾಡುತ್ತ ಧರ್ಮದ ಸಾರವನ್ನು ಲೋಕಕ್ಕೆ ಬೀರಿದ್ದಾನೆ. ಭಗವದ್ಗೀತೆಯು ಭರತಖಂಡದ ಮತಾಚಾರ್ಯ ರಿಗೆಲ್ಲ ಮುಖ್ಯವಾದ ಗ್ರಂಥ. ಅದು ಸಮಸ್ತ ಉಪನಿಷತ್ತುಗಳ ಸಾರ ವೆಂದೇ ಆಸ್ತಿಕರ ನಂಬಿಕೆ. ಅಲ್ಲದೆ ಉಪನಿಷತ್ತಿನ ಕೃಷ್ಣನು ಘೋರ ಆಂಗಿರಸನಲ್ಲಿ ಪಡೆದ ಉಪದೇಶಕ್ಕೂ ಗೀತೆಯಲ್ಲಿ ಶ್ರೀಕೃಷ್ಣನು ಅರ್ಜುನ

ನಿಗೆ ಮಾಡಿರುವ ಉಪದೇಶಕ್ಕೂ ಬಹಳ ಹೋಲಿಕೆಯಿದೆ. ಅಂಗಿರಸನು ಕೃಷ್ಣನಿಗೆ "ಪುರುಷಯಜ್ಞ" ವಿದ್ಯೆಯನ್ನು ಉಪದೇಶಿಸಿದನಂತೆ. ಮನುಷ್ಯ ಜೀವನವನ್ನೇ ಒಂದು ಯಜ್ಞಕ್ಕೆ ಹೋಲಿಸಿ ಜೀವನದ ನಿತ್ಯಕೃತ್ಯಗಳನ್ನೇ ಯಜ್ಞಾಂಗಳೆಂದು ವರ್ಣಿಸಲಾಗಿದೆ. ಮನುಷ್ಯನು ಹಸಿದು ಅಥವಾ ನೀರಡಸಿ ಸಂತೋಷವಿಲ್ಲದಿರುವ ಸ್ಥಿತಿಯೇ "ದೀಕ್ಷೆ". ಅವನು ಉಂಡು, ಕುಡಿದು ಸುಖಿಸಿ, ಸಂತೋಷಪಟ್ಟಾಗ ಅದು "ಉಪಸದ" ತಪಸ್ಸು, ದಾನ, ಆರ್ಜವ, ಅಹಿಂಸೆ, ಸತ್ಯವಚನ— ಇವೇ ಯಜ್ಞದಕ್ಷಿಣೆ. ಮರಣವೇ ಅವಭೃತ.[1] ಹೀಗೆ ತಿನ್ನುವುದು ಕುಡಿಯುವುದು ಮೊದಲಾದ ನೈಸರ್ಗಿಕ ಕೃತ್ಯಗಳನ್ನೇ ಯಾಗಾಂಗಗಳೆಂದು ವರ್ಣಿಸಿದೆ. ಮಾನವ ಜೀವನವೇ ವೈದಿಕ ಯಾಗಕ್ಕೆ ಸಮಾನವೆಂಬ ಅಭಿಪ್ರಾಯವು ಉಪನಿಷತ್ತುಗಳಲ್ಲಿ ಹಲವು ಸಾರಿ ಬಂದಿದೆ. ಇದು ಬಲಿ, ಹೋಮ ಮುಂತಾದುವುಗಳಿಂದ ಕೂಡಿದ ಯಜ್ಞದ ಪ್ರಾಶಸ್ತ್ಯವನ್ನು ಕಡಿಮೆಮಾಡುತ್ತದೆ. ಕೃಷ್ಣನೇ ಪರದೈವವೆಂದು ಭಾವಿಸಿ ಪೂಜಿಸುವ ಭಾಗವತ ಮತದಲ್ಲಿಯೂ ಬಲಿಹೋಮಗಳಿಗೆ ಹೆಚ್ಚಿನ ಪ್ರಾಶಸ್ತ್ಯವಿಲ್ಲ. ಭಗವದ್ಗೀತೆಯ ಕೆಲವು ವಾಕ್ಯಗಳಲ್ಲಿ ಈ ಅರ್ಥ ತೋರುತ್ತದೆ.

ಯತ್ಕರೋಷಿಯದಶ್ನಾಸಿ ಯಜ್ಜುಹೋಷಿ ದದಾಸಿಯತ್
ಯತ್ತಪಸ್ಯಸಿಕೌಂತೇಯ ತತ್ಕುರುಷ್ವ ಮದರ್ಪಣಮ್.

ತಪೋದಾನಾದಿಗಳೇ ಯಜ್ಞ ದಕ್ಷಿಣೆಗಳೆಂದು ಉಪನಿಷತ್ತಿನಲ್ಲಿ ಹೇಳಿದ್ದರೆ ಗೀತೆಯಲ್ಲಿ ದ್ರವ್ಯಯಜ್ಞ, ತಪೋಯಜ್ಞ ಮುಂತಾದ ಹಲವು ಬಗೆಯ ಯಜ್ಞಗಳಿವೆಯೆಂದು ಹೇಳಿದೆ. ಹೀಗೆ ಗೀತೆ ಉಪನಿಷತ್ತು ಮುಂತಾದವು

1. ಸಯದ ಶಿಶಿಷತಿ ಯತ್ಪಿಪಾಸತಿಯನ್ನರಮತೇ ತಾ ಅಸ್ಯದೀಕ್ಷಾಃ ಅಥ ಯದ ಶ್ನಾತಿ ಯತ್ಪಿಬತಿಯದ್ರಮತೇ ತದುಪಸದೇ ನೈತಿ.

ಅಥ ಯತ್ತಪೋ ದಾನಮಾರ್ಜವಮಹಿಂಸಾ ಸತ್ಯವಚನ ಮಿತಿ ತಾ ಅಸ್ಯದಕ್ಷಿಣಾಃ

. . . ತನ್ಮರಣಮೇ ವಾಸ್ಯಾವಭೃತಃ

ಗಳ ಕಾಲಕ್ಕೇ, ಇನ್ನೂ ಮುಂಚೆ, ಬೃಹದಾರಣ್ಯಕದ ವೇಳೆಗೇ, ತತ್ವ ದರ್ಶಿಗಳು ಮತ್ತು ಧರ್ಮೋಪದೇಶಕರು ಬಲಿಹೋಮಗಳಿಂದ ವಿಮುಖರಾಗಿ ಯಜ್ಞ ಶಬ್ದಕ್ಕೆ ಬೇರೆ ಅರ್ಥಕಲ್ಪನೆ ಮಾಡತೊಡಗಿದ್ದರೆಂದು ತಿಳಿಯುತ್ತದೆ. ಇವೇ ಅಲ್ಲದೆ ಇನ್ನೂ ಕೆಲವು ಕಡೆಗಳಲ್ಲಿ ಗೀತಾವಾಕ್ಯಗಳಿಗೂ ಉಪನಿಷದ್ವಾಕ್ಯಗಳಿಗೂ ಬಹಳ ಹೋಲಿಕೆಯಿದೆ:—

ಸರ್ವೋಪನಿಷದೋ ಗಾವೋದೋಗ್ಧಾ ಗೋಪಾಲನಂದನಃ

ಪಾರ್ಥೋವತ್ಸಃ ಸುಧೀ ಭೋಕ್ತಾದುಗ್ಧಂ ಗೀತಾಮೃತಂ ಮಹತ್

(ಉಪನಿಷತ್ತುಗಳು ಗೋವುಗಳು . . ಶ್ರೀಕೃಷ್ಣನೇ ಹಾಲು ಕರೆಯುವವನು. ಪಾರ್ಥನೇ ಕರು. ಗೀತಾಮೃತವೇ ಹಾಲು. ಅದನ್ನು ಕುಡಿಯುವ ಭೋಕ್ತರು ಜ್ಞಾನಿಗಳು.) ಈ ಮಾತಿನಿಂದ ಉಪನಿಷತ್ತುಗಳ ಸಾರವೇ ಗೀತೆಯೆಂದೂ ಶ್ರೀಕೃಷ್ಣನೇ ಉಪದೇಶಕರ್ತನೆಂದೂ ವ್ಯಕ್ತವಾಗಿದೆ. ಆದ್ದರಿಂದ ಉಪನಿಷತ್ಕೃಷ್ಣನೇ ಗೀತಾಚಾರ್ಯನಾದ ಕೃಷ್ಣನೆಂದು ತಿಳಿಯಬೇಕು.

ಕೃಷ್ಣ ವಾಸುದೇವರು ಬೇರೆ ಬೇರೆ ವ್ಯಕ್ತಿಗಳೆಂದೂ ಪಾಂಡವ ಪಕ್ಷಪಾತಿಯಾದ ವಾಸುದೇವ ಕೃಷ್ಣನ ಕಥೆಯೊಡನೆ ಯಾವುದೋ ಕಾಲದಲ್ಲಿ ಉಪನಿಷತ್ಕೃಷ್ಣನ ಕಥೆ ಬೆರೆತಿರಬಹುದೆಂದೂ ಒಂದು ತರ್ಕವಿದೆ. [1]ವಾಸುದೇವನ ತಂದೆಯ ಹೆಸರು ಆನಕದುಂದುಭಿಯೆಂದು ಹರಿವಂಶದಲ್ಲಿಯೂ, ಅಮರಕೋಶದಲ್ಲಿಯೂ, ಹೇಳಿದೆ. ಮೊದಲಿನಿಂದಲೂ ವಾಸುದೇವನೆಂಬ ಹೆಸರು ದೇವರಿಗೇ ಸಲ್ಲುತ್ತಿದ್ದಿತು. ತೈತ್ತಿರೀಯಾರಣ್ಯಕದಲ್ಲಿ "ನಾರಾಯಣಾಯ ವಿದ್ಮಹೇ ವಾಸುದೇವಾಯ ಧೀಮಹಿ। ತನ್ನೋವಿಷ್ಣುಃ ಪ್ರಚೋದಯಾತ್" ಎಂಬ ವಾಕ್ಯವಿದೆ.

---

1. ಈಗ ಕೃಷ್ಣ ವಾಸುದೇವರೆಂಬ ಎರಡು ಹೆಸರುಗಳೂ ಒಬ್ಬ ವ್ಯಕ್ತಿಗೇ ಅನ್ವಯಿಸುತ್ತವೆ. ಕೃಷ್ಣನು ವಸುದೇವನ ಮಗನಾದ್ದರಿಂದ ಅವನಿಗೆ ವಾಸುದೇವನೆಂಬ ಹೆಸರು ಬಂದಿತೆಂದು ಹೇಳುವುದು ವಾಡಿಕೆ. ಆದರೆ ವಸುದೇವನ ಇನ್ನೊಬ್ಬ ಮಗನಾದ ಬಲರಾಮನಿಗೆ ವಾಸುದೇವನೆಂಬ ಹೆಸರಿಲ್ಲ. ಅಲ್ಲದೆ ಕೆಲವೆಡೆ

ಇಲ್ಲಿ ನಾರಾಯಣ, ವಿಷ್ಣು, ವಾಸುದೇವ, ಎಂಬ ಮೂರು ಹೆಸರುಗಳೂ ಒಬ್ಬನವೇ ಆಗಿವೆ. "ವಾಸನಾದ್ವಾಸುದೇವಸ್ಯವಾಸಿತಂತೇ ಜಗತ್ತ್ರಯಂ । ಸರ್ವ ಭೂತನಿವಾಸೋಸಿ ವಾಸುದೇವ ನಮೋಸ್ತುತೇ" ಎಂಬಲ್ಲಿ ವಾಸುದೇವನು ಎಲ್ಲ ಜೀವಿಗಳಲ್ಲಿಯೂ ವಾಸಮಾಡುತ್ತಿರುವನೆಂದೂ ಆದ್ದರಿಂದಲೇ ಅವನಿಗೆ ವಾಸುದೇವನೆಂಬ ಹೆಸರು ಬಂದಿತೆಂದೂ ಅರ್ಥವಾಗುತ್ತದೆ. ರಾಮಾಯಣದಲ್ಲಿ ಸಗರ ಚಕ್ರವರ್ತಿಯ ಕಥೆ ಹೇಳುವಾಗ ವಾಸುದೇವನೆಂಬ ಹೆಸರು ಬಂದಿದೆ. ಸಗರನ ಮಕ್ಕಳು ಭೂಮಿಯನ್ನು ಅಗೆದು ಪ್ರವೇಶಿಸಿದಾಗ ಅವರಿಗೆ ವಾಸುದೇವನು ಕಪಿಲನಾಗಿ ಕಾಣಿಸಿದನಂತೆ.[1] ಸನಾತನನಾದ ವಾಸುದೇವನೇ ಕಪಿಲನ ರೂಪದಲ್ಲಿ ಕಾಣಿಸಿಕೊಂಡನು. ಅಂತು ವಾಸುದೇವ ಶಬ್ದವು ಮೊದಲಿನಿಂದಲೂ ದೇವವಾಚಿಯಾಗಿದ್ದುದರಿಂದ ಕೃಷ್ಣ ಕಥೆಯು ವಾಸುದೇವನ ಕಥೆಯೊಡನೆ ಬೆರೆತು ಹೋದಾಗ ವಾಸುದೇವ ಶಬ್ದಕ್ಕೆ ಹೊಸ ಅರ್ಥವನ್ನು ಕಲ್ಪಿಸಿದಂತೆ ತೋರುತ್ತದೆ. ಮಾನವ ಕಥೆಯಾಗಿ ಆರಂಭವಾದ ಕೃಷ್ಣ ವೃತ್ತಾಂತವು ದೇವದೇವನಾದ ವಾಸುದೇವ ವೃತ್ತಾಂತದಲ್ಲಿ ಐಕ್ಯವಾಯಿತು. ಭಾರತದ ಕೃಷ್ಣನು ಕಾಷ್ಣಾರ್ಯನ ಗೋತ್ರಕ್ಕೆ ಸೇರಿದವನಾದ್ದರಿಂದ ಕೃಷ್ಣನೆಂಬ ಹೆಸರು ಅವನಿಗೆ

---

ವಾಸುಭದ್ರ ಬಲಭದ್ರರೆಂಬ ಹೆಸರುಗಳೂ ಬಳಕೆಯಲ್ಲಿವೆ. ಭಾಸನು ತನ್ನ 'ದೂತವಾಕ್ಯ'ದಲ್ಲಿ ಕೃಷ್ಣನನ್ನು ವಾಸುಭದ್ರನೆಂದು ಕರೆದಿದ್ದಾನೆ. ಯಕ್ಷರ ದೇವತೆಯಾದ ಮಾಣಿಭದ್ರನನ್ನು ಮಣಿಭದ್ರನೆಂದೂ ಕರೆಯುವುದುಂಟು. ನರಸಿಂಹ, ನಾರಸಿಂಹ ಎಂಬ ಎರಡು ರೂಪಗಳೂ ಪ್ರಯೋಗದಲ್ಲಿವೆ. ಆದರೆ ನರಸಿಂಹನ ಮಗ ನಾರಸಿಂಹನೆಂದು ಯಾರೂ ಹೇಳಿಲ್ಲ. ಆದ್ದರಿಂದ ವಸುದೇವ, ವಾಸುದೇವ ಎಂಬ ಎರಡು ಹೆಸರುಗಳೂ ಒಬ್ಬನಿಗೇ ಅನ್ವಯಿಸುತ್ತಿದ್ದಿರಬಹುದೆಂದು ಒಂದು ಹೇಳಿಕೆ. 'ವಾಸುದೇವ' ಎಂಬ ಹೆಸರಿನ ಆಧಾರದಿಂದ ಅವನ ತಂದೆಯ ಹೆಸರನ್ನು "ವಸುದೇವ" ಎಂದು ಏಕೆ ಕಲ್ಪಿಸಿರಬಾರದು ?

1. ದದೃಶುಃ ಕಪಿಲಂತತ್ರ ವಾಸುದೇವಂ ಸನಾತನಂ - ಬಾಲಕಾಂಡ 40-25.

ಒಪ್ಪುತ್ತದೆ.[2] ನಾಮಸಾದೃಶ್ಯದಿಂದ ಅದು ಉಪನಿಷತ್ತಿನ ಕೃಷ್ಣಕಥೆಯೊಡನೆ ಸೇರಿತು. ಉಪನಿಷತ್ತಿನ ಕೃಷ್ಣನ ತಾಯಿಯ ಹೆಸರೂ ದೇವಕಿ. ಭಾರತದ ಕೃಷ್ಣನ ತಾಯಿಯ ಹೆಸರೂ ಅದೇ. ಇಬ್ಬರೂ ಧಾರ್ಮಿಕ ವಿಚಾರಗಳಲ್ಲಿ ಶ್ರದ್ಧೆ ಉತ್ಸಾಹಗಳಿದ್ದವರು. ಈ ಕಾರಣಗಳಿಂದ ಈ ಇಬ್ಬರ ಕಥೆಗಳೂ ಸೇರಿ ಒಂದಾಗುವುದು ಬಹಳ ಸುಲಭವಾಯಿತು.

ವಾಸುದೇವ ಮತ್ತು ಕೃಷ್ಣರ ಜತೆಗೆ ವಿಷ್ಣುವಿನ ಕಥೆಯೂ ಸೇರಿಕೊಂಡಿದೆ. ವೇದಗಳಲ್ಲಿ ವಿಷ್ಣುವಿನ ಸುದ್ದಿ ಬಂದಿದೆ. ಋಗ್ವೇದದ ಕೆಲವು ಋಕ್ಕುಗಳು ವಿಷ್ಣುಸ್ತೋತ್ರವನ್ನೊಳಗೊಂಡಿವೆ. ಆದರೆ ಅಲ್ಲಿ ವಿಷ್ಣುವು ದೇವದೇವನಲ್ಲ. ಅವನು ಇಂದ್ರನ ಸ್ನೇಹಿತ[3]. ಅವನ ಆಜ್ಞಾಧಾರಕನೂ ಹೌದು. ವೇದಗಳ ಕಾಲದಲ್ಲಿ ಇಂದ್ರನ ಆಶ್ರಿತನಾಗಿರುವ ವಿಷ್ಣುವು ವೇದಯುಗವನ್ನು ದಾಟಿ ಪುರಾಣ ಯುಗವು ಬರುವ ಹೊತ್ತಿಗೆ ದೇವರ ದೇವನಾಗಿದ್ದಾನೆ. ಇಂದ್ರನೇ ಹಲವು ಸಲ ವಿಷ್ಣುವಿನ ಸಂಗಡ ಯುದ್ಧಮಾಡಿ ಸೋಲುತ್ತಾನೆ. ಈ ಪರಿವರ್ತನೆಯಾದ ಮೇಲೆ ವಿಷ್ಣು ವಾಸುದೇವನ ಸಮನೆಂದಾಯಿತು.

ವಿಷ್ಣುವಿನ ಹಿರಿಮೆಯು ಹೆಚ್ಚಳಕ್ಕೆ ಕಾರಣಗಳನ್ನು ಹೀಗೆ ಹೇಳಬಹುದು. ವೇದದಲ್ಲಿ ವಿಷ್ಣುವಿನ ಮೂರು ಹೆಜ್ಜೆಗಳ ವರ್ಣನೆ ಹಲವು ಸಲ ಬಂದಿದೆ. "ತ್ರೀಣಿಪದಾ ವಿಚಕ್ರಮೇ ವಿಷ್ಣುರ್ಗೋಪಾ ಅದಾಭ್ಯಃ" ಈ ಮೂರು ಹೆಜ್ಜೆಗಳು ಸೂರ್ಯನ ಉದಯ, ಮಧ್ಯಾಹ್ನ, ಅಸ್ತಮಾನಗಳೇ ಎಂದು ಒಂದು ವಾದ. ಇನ್ನೊಂದು ಕಡೆ "ಇದಂ ವಿಷ್ಣುರ್ವಿಚಕ್ರಮೇ ತ್ರೇಧಾನಿದಧೇ ಪದಂ" ಎಂಬ ವಾಕ್ಯವಿದೆ. ಇದಕ್ಕೆ ವಿಷ್ಣುವು ವಾಸ್ತವವಾಗಿ ಭೂಮಿ ಅಂತರಿಕ್ಷ ಆಕಾಶಗಳನ್ನು ಮೆಟ್ಟಿದನೆಂದು ಅರ್ಥ

---

2. ಭಂಡಾರ್‌ಕರ್ "ವೈಷ್ಣವಿಜಮ್, ಶೈವಿಜಮ್".

3. "ಇಂದ್ರಸ್ಯಯುಜ್ಯಃ ಸಖಾ".

ಮಾಡಲಾಗಿದೆ. ಈಗ ವಿಷ್ಣುವಿನ ಮೂರು ಹೆಜ್ಜೆಗಳು ಸೂರ್ಯನ ದೈನಂದಿನ ಚಲನೆಯ ಮೂರು ಘಟ್ಟಗಳೆಂಬ ಅರ್ಥಹೋಗಿ ಅವು ಮೂರು ಲೋಕಗಳೆಂಬ ಅರ್ಥ ಬಂದಿತು. ಬಹುಶಃ ಇದರಿಂದಲೇ ವಾಮನಾವತಾರದ ಕಥೆ ಹುಟ್ಟಿದ್ದರೂ ಇರಬಹುದು! ಆದರೆ ವೇದದಲ್ಲಿ ಎಲ್ಲಿಯೂ ಅವತಾರ ತತ್ವದ ಸೂಚನೆಯಿಲ್ಲ. ವಿಷ್ಣುವಿನ ಈ ಮೂರು ಹೆಜ್ಜೆಗಳಲ್ಲಿ ಎರಡು ಎಲ್ಲರಿಗೂ ತಿಳಿಯುವಂಥವೆಂದೂ ಮೂರನೆಯದು ವಿಷ್ಣು ವಿನಾ ಯಾರಿಗೂ ತಿಳಿಯದೆಂದೂ ಒಂದು ಹೇಳಿಕೆಯಿದೆ. ಅದೇ ವಿಷ್ಣುವಿನ ಪರಮ ಪದ! ಆ ಪರಮ ಪದದಲ್ಲಿ ದೇವತೆಗಳೂ ಪಿತೃಗಳೂ ಆನಂದಿಸುವರು! ಪಿತೃಗಳಿಗೂ ದೇವತೆಗಳಿಗೂ ಆವಾಸವಾದ ವಿಷ್ಣುವಿನ ಈ 'ಪರಮ ಪದ'ದ ದೆಸೆಯಿಂದ ವಿಷ್ಣುವಿನ ಪ್ರಾಶಸ್ತ್ಯ ಹೆಚ್ಚಿತು. ಕಠೋಪನಿಷತ್ತಿನಲ್ಲಿ ಮನುಷ್ಯನ ಜೀವನವನ್ನು ಒಂದು ಪ್ರಯಾಣಕ್ಕೆ ಹೋಲಿಸುವ ಈ ವಾಕ್ಯವಿದೆ:

"ವಿಜ್ಞಾನಸಾರಥಿರ್ಯಸ್ತು ಮನಃ ಪ್ರಗ್ರಹವಾನ್ನರಃ
ಸೋಽಧ್ವನಃ ಪಾರಮಾಪ್ನೋತಿತದ್ವಿಷ್ಣೋಃ ಪರಮಂ ಪದಂ"

ಯಾವ ಮಾನವನು ವಿಜ್ಞಾನವನ್ನೇ ಸಾರಥಿಯಾಗಿ ಮಾಡಿಕೊಂಡು ಓಡುವ ಮನಸ್ಸಿಗೆ ಕಡಿವಾಣ ಹಾಕುವನೋ ಅವನು ಪ್ರಯಾಣದ ಕೊನೆಮುಟ್ಟುತ್ತಾನೆ. ಅದೇ ವಿಷ್ಣುವಿನ ಪರಮ ಪದ.

ಶತಪಥ ಬ್ರಾಹ್ಮಣದ ವೇಳೆಗೆ ವಿಷ್ಣುವಿನ ಪ್ರಾಶಸ್ತ್ಯವು ಬಹಳವಾಗಿ ಹೆಚ್ಚಿ ದೇವತೆಗಳಲ್ಲೆಲ್ಲ ಅತ್ಯಂತ ಶ್ರೇಷ್ಠನೆಂಬ ಕಲ್ಪನೆ ಬಂದಿತ್ತು. ದೇವತೆಗಳೆಲ್ಲ ಒಂದು ಯಜ್ಞಕ್ಕಾಗಿ ನೆರೆದಿದ್ದಾಗ ತಮ್ಮಲ್ಲಿ ಯಾರು ಮೊದಲು ಯಜ್ಞವನ್ನು ಮುಗಿಸುತ್ತಾರೆಯೋ ಅವರಿಗೆ ತಮ್ಮ ಗುಂಪಿನ ಒಡೆತನ ಸಲ್ಲಬೇಕೆಂದು ಸಂಕಲ್ಪಿಸಿದರೆಂದೂ ಅದರಂತೆ ವಿಷ್ಣುವು ಮೊದಲು ಯಜ್ಞ ಕರ್ಮವನ್ನು ಮಾಡಿ ಮುಗಿಸಿದ್ದರಿಂದ ಅವನು ದೇವತೆಗಳಿಗೆಲ್ಲ ಮುಖಂಡನಾದನೆಂದೂ ಒಂದು ಕಥೆ ಬಂದಿದೆ.

ವಿಷ್ಣುವು ದೇವದೇವನೆಂದಾದುದರಿಂದಲೂ ವಾಸುದೇವನು ದೇವ

ರೆಂದು ಮೊದಲೇ ನಂಬಿಕೆಯಿದ್ದುದರಿಂದಲೂ ಈ ಎರಡು ವ್ಯಕ್ತಿಗಳ ಕಥೆಯೂ ಸೇರಿ ಒಂದಾಗುವುದಕ್ಕೆ ಅನುಕೂಲವಾಯಿತು. ಅಲ್ಲದೆ ವಾಸುದೇವ ಮತ್ತು ವಿಷ್ಣು ಶಬ್ದಗಳಿಗೆ ಅರ್ಥಸಾದೃಶ್ಯವೂ ಇದೆ. ವಿಷ್ಣು ಶಬ್ದವು ವಿಷ್ ಧಾತುವಿನಿಂದ ಬಂದದ್ದು. 'ವಿಷ್' ಎಂದರೆ ಪ್ರಸರಿಸು, ಹರಡು, ವ್ಯಾಪಿಸು, ಎಂದರ್ಥ. ಎಲ್ಲ ಪದಾರ್ಥಗಳಲ್ಲಿಯೂ ಹರಡಿಕೊಂಡಿರುವ ವನು ವಿಷ್ಣು. ವೇದಗಳಲ್ಲಿ ಪ್ರಸಿದ್ಧವಾಗಿರುವ ವಿಷ್ಣುವಿನ ಮೂರು ಹೆಜ್ಜೆಗಳ ಕಥೆಯಿಂದಲೂ ಅವನು ಮೂರು ಲೋಕಗಳಲ್ಲಿಯೂ ವ್ಯಾಪಿಸಿದವನೆಂಬ ಅರ್ಥ ಬರುತ್ತದೆ. ವಾಸುದೇವ ಶಬ್ದಕ್ಕೂ ಸರ್ವಾಂತರ್ಯಾಮಿಯೆಂಬರ್ಥವಿದೆ. "ಛಾದಯಾಮಿ ಜಗದ್ವಿಶ್ವಮ್ ಭೂತ್ವಾಸೂರ್ಯ ಇವಾಂಶುಭಿಃ ಸರ್ವಭೂತಾಧಿ ವಾಸಶ್ಚ ವಾಸುದೇವಸ್ತತೋಽಹ್ಯಯಂ" "ವಸನಾತ್ ಸರ್ವಭೂತಾನಾಮ್ ವಾಸುದೇವಸ್ತತೋ ವೇದ್ಯಃ" ಎಂದು ಮಹಾಭಾರತದಲ್ಲಿಯೇ ಹೇಳಿದೆ. ಸರ್ವಭೂತಗಳಲ್ಲಿ ವಾಸಮಾಡುವವನಾದ್ದರಿಂದ ವಾಸುದೇವನೆಂದು ಹೆಸರಾಯಿತೆಂದು ಇದರಿಂದ ಸ್ಪಷ್ಟವಾಗಿದೆ. ಅಲ್ಲದೆ 'ವಾಸು' ಶಬ್ದಕ್ಕೇ ವಿಷ್ಣುವೆಂಬ ಅರ್ಥವಿದೆ.[1] ಹೀಗೆ ವಿಷ್ಣು ಮತ್ತು ವಾಸುದೇವ ಎಂಬ ಶಬ್ದಗಳು ಒಂದೇ ವ್ಯಕ್ತಿಗೆ ಅನ್ವಯಿಸುವಂತಾಗಲು ಅವೆರಡಕ್ಕೂ ಇರುವ ಅಂತರ್ಯಾಮಿಯೆಂಬ ಅರ್ಥವೂ ಒಂದು ಮುಖ್ಯ ಕಾರಣ.

ನಾರಾಯಣ ಶಬ್ದಕ್ಕೂ 'ಅಂತರ್ಯಾಮಿ' ಯೆಂಬ ಅರ್ಥವಿದೆ. ನಾರದ ಪಂಚರಾತ್ರದಲ್ಲಿ ವಿಷ್ಣುವಿಗೆ 'ನಾರಶಾಯಿ' ಯೆಂಬ ಹೆಸರೂ ಇದೆ. ನಾರದಲ್ಲಿ ಮಲಗುವವವನು ನಾರಶಾಯಿ. ನಾರಾಯಣನೆಂದರೂ ಇದೇ ಅರ್ಥ. ಅಯನವೆಂದರೆ ವಾಸಸ್ಥಳವೆಂದರ್ಥ. 'ನಾರದಲ್ಲಿ ವಾಸಿಸುವನು ಅಥವಾ ಸಂಚರಿಸುವವನು ನಾರಾಯಣ. ಹೀಗೆ ವಿಷ್ಣು ವಾಸುದೇವ ನಾರಾಯಣ ಎಂಬ ಶಬ್ದಗಳು ಮೊದಲು ಬೇರೆ ಬೇರೆ ವ್ಯಕ್ತಿಗಳಿಗೆ ಅನ್ವಯಿಸುತ್ತಿದ್ದರೂ ಅವು ಸಮಾನಾರ್ಥಕ ಪದಗಳಾದ್ದರಿಂದ

1 Apte's Sanskrit English Dictiona y

ಕ್ರಮಕ್ರಮವಾಗಿ ಐಕ್ಯವನ್ನು ಹೊಂದಿದುವು. ಹಲವು ದೇವರುಗಳು ಹೀಗೆ ಒಂದಾದಮೇಲೆ ಒಬ್ಬನೇ ದೇವರು ಹಲವು ರೂಪಗಳಲ್ಲಿ ಕಾಣಿಸಿಕೊಳ್ಳ ಬಲ್ಲನೆಂಬ ಭಾವ ತಲೆದೋರಿ ಅವತಾರ ತತ್ವಕ್ಕೆ ಅಂಕುರವಾಯಿತು. ವಾಸುದೇವ ಕೃಷ್ಣನು ವಿಷ್ಣುನಾರಾಯಣನ 'ಅವತಾರ' ನೆನಿಸಿದನು.

ನಾರಾಯಣ, ವಿಷ್ಣು, ವಾಸುದೇವ, ಕೃಷ್ಣರ ಕಥೆಗಳ ಜತೆಗೆ ಒಬ್ಬ ಗೋಪಾಲ ಕೃಷ್ಣನ ಹೆಸರೂ ಸೇರಿದೆ. ವೇದೋಪನಿಷತ್ತುಗಳಲ್ಲಾಗಲಿ, ಪಾಂಚರಾತ್ರ ಧರ್ಮದ ವರ್ಣನೆಯಿರುವ ಮಹಾಭಾರತದನಾರಾಯಣೀಯ ಭಾಗದಲ್ಲಾಗಲಿ ಅಂಥಾ ಗೋಪಾಲ ದೇವರ ಕಥೆಯ ಸೂಚನೆಯಿಲ್ಲ. ಕೊನೆಗೆ, ಪತಂಜಲಿಯ ಮಹಾ ಭಾಷ್ಯದಲ್ಲಿ ಸಹ ಆ ದೇವರ ಸುದ್ದಿಯಿಲ್ಲ. ನಾನಾಘಾಟ್ ಗುಹೆಯಲ್ಲಿ ದೊರೆತ ಶಾಸನದಲ್ಲಿ ಕಂಸವಧೆಗಾಗಿ ವಾಸುದೇವನ ಅವತಾರವಾಯಿತೆಂಬ ಹೇಳಿಕೆಯಿದೆ. ಆದರೆ ಗೋಕುಲದಲ್ಲಿ ಕೃಷ್ಣನು ಕೊಂದ ಉಳಿದ ರಾಕ್ಷಸರ ಸುದ್ದಿಯಿಲ್ಲ. ಭಾಗವತವೇ ಮೊದಲಾದ ಗ್ರಂಥಗಳಲ್ಲಿ ಹೇಳಿರುವಂತೆ, ಕೃಷ್ಣನು ಕೇವಲ ಒಬ್ಬ ಕಂಸನ ವಧೆಯ ಸಲುವಾಗಿ ಅವತಾರವೆತ್ತಲಿಲ್ಲ; ಎಲ್ಲ ದೈತ್ಯರನ್ನೂ ಕೊಲ್ಲುವಸಲುವಾಗಿಯೇ ಭೂಲೋಕದಲ್ಲಿ ಹುಟ್ಟಿದನು. 'ಗೋವಿಂದ' ಎಂಬ ಶಬ್ದವು ಭಾರತದಲ್ಲಿ ಬಂದಿದೆಯಾದರೂ ಅದು ಗೋವುಗಳ ವಿಷಯಕ್ಕೆ ಸಂಬಂಧಿಸಿದ್ದಲ್ಲ. ಹಿಂದೆ ವರಾಹಾವತಾರದಲ್ಲಿ ವಿಷ್ಣುವು ಭೂಮಿಯನ್ನು ಉದ್ಧಾರ ಮಾಡಿದ್ದುದರಿಂದ ಅವನಿಗೆ ಗೋವಿಂದನೆಂಬ ಹೆಸರು ಬಂದಿತು. 'ಗೋ' ಎಂದರೆ ಭೂಮಿಯೆಂದರ್ಥ. ಋಗ್ವೇದದಲ್ಲಿ ಇಂದ್ರನಿಗೆ 'ಗೋವಿದ'ನೆಂಬ ಹೆಸರಿದೆ. ಇಂದ್ರನಿಗೆ ಪ್ರಾಶಸ್ತ್ಯ ಕಡಿಮೆಯಾಗಿ ವಾಸುದೇವ ಕೃಷ್ಣನಿಗೇ 'ದೇವದೇವ' ಪದವಿಯುಂಟಾದಾಗ ಇಂದ್ರನ ಈ ಬಿರುದೂ ಕೃಷ್ಣನಿಗೇ ಬಂದಿರಬಹುದು. ಋಗ್ವೇದದಲ್ಲಿ ವಿಷ್ಣುವಿಗೆ 'ಗೋಪ'[1] ಎಂಬ

1. ತ್ರೀಣಿಪದಾವಿಚಕ್ರಮೇ ವಿಷ್ಣುರ್ಗೋಪಾ ಅದಾಭ್ಯಃ

2. ಆರ್. ಜಿ. ಭಂಡಾರ್‌ಕರ್ 'ವೈಷ್ಣವಿಜಮ್, ಶೈವಿಜಮ್, ಇತ್ಯಾದಿ'

ವಿಶೇಷಣವಿದೆ. ಆದ್ದರಿಂದ ಕೃಷ್ಣನಿಗೆ ಗೋವಿಂದ, ಗೋಪಾಲ ಮುಂತಾದ ಹೆಸರುಗಳೂ ಬಂದವು.

ಗೋಪಾಲಕೃಷ್ಣನ ಕಥೆಗೆ 'ಹರಿವಂಶ'ವು ಮುಖ್ಯಾಧಾರ. ಹರಿವಂಶದಲ್ಲಿ 'ದೀನಾರ' ಎಂಬ ಶಬ್ದವಿರುವುದರಿಂದ ಇದು ಕ್ರಿಸ್ತಶಕ ಮೂರನೆಯ ಶತಮಾನಕ್ಕಿಂತ ಮುಂಚಿನದಲ್ಲವೆಂದು ತೋರುತ್ತದೆ. ಆದಕ್ಕಿಂತ ಮೊದಲು ಕೃಷ್ಣನ ಬಾಲ್ಯದ ಕಥೆಗಳು ಗೋಪಾಲಕರಾದ ಆಭೀರರ ಸಂಗಡದಲ್ಲಿ ಬಳಕೆಯಲ್ಲಿದ್ದಿರಬೇಕೆಂದೂ ಮೊದಲಿಗೆ ಅವರು ಊರಿಂದೂರಿಗೆ ಅಲೆಯುವ ಗೋಪಾಲಕ ವೃತ್ತಿಯವರಾಗಿದ್ದು ಅಮೇಲೆ ಭರತ ಖಂಡದ ಪಶ್ಚಿಮ ಮತ್ತು ಉತ್ತರ ಭಾಗಗಳಲ್ಲಿ ನೆಲಸಿದರೆಂದೂ ಅವರಲ್ಲಿ ಬಳಕೆಯಲ್ಲಿದ್ದ ಕಥೆಗಳೇ 'ಹರಿವಂಶ' ದಲ್ಲಿ ಗ್ರಂಥಸ್ಥವಾದುವೆಂದೂ ಊಹಿಸಲಾಗಿದೆ. ಹರಿವಂಶದಲ್ಲಿ ಗೋವರ್ಧನ ಪೂಜೆಯ ಸಂದರ್ಭದಲ್ಲಿ ಕೃಷ್ಣನು ನಂದನಿಗೆ ಹೇಳಿದ ಮಾತುಗಳಿಂದ ಅವನ ಸಂಗಡಿಗರಾದ ಗೋಪರು ಆಭೀರರಂತೆಯೇ ಇದ್ದರೆಂದು ತಿಳಿಯುತ್ತದೆ. ಗೊಲ್ಲರ ಹಳ್ಳಿಯನ್ನು "ಆಭೀರಪಲ್ಲಿ" ಎಂದು ಹರಿವಂಶದಲ್ಲಿ ವರ್ಣಿಸಿದೆ. ಆಭೀರರು ಜಾತಿಯಲ್ಲಿ ಕ್ಷತ್ರಿಯರಾದರೂ ವೃತ್ತಿಯಲ್ಲಿ ಗೋಪಾಲಕರು. ಅವರು 'ಪಂಚನದ' (ಈಗಿನ ಪಂಜಾಬು) ದಲ್ಲಿ ವಾಸಮಾಡುತ್ತಿದ್ದ ಮ್ಲೇಚ್ಛರೆಂದೂ ದಸ್ಯುಗಳೆಂದೂ ಹೇಳಿದೆಯಾದ್ದರಿಂದ ಆಭೀರರು ಭಾರತದ ಪಶ್ಚಿಮೋತ್ತರ ಭಾಗಗಳಲ್ಲಿ ನೆಲಸಿದ್ದು ಆಮೇಲೆ ಭಾರತದ ಇತರ ಭಾಗಗಳಿಗೆ ಹೊರಟರೆಂದೂ ನಂಬಬಹುದು. ಅವರು ಗೋಪಾಲ ಕೃಷ್ಣನ ಕಥೆಗಳನ್ನು ತಾವು ಹೋದೆಡೆಗಳಲ್ಲೆಲ್ಲ ಹಬ್ಬಿಸಿದ್ದಾರೆ. ಆ ಕಥೆಗಳೇ ಕಾಲಕ್ರಮದಲ್ಲಿ ಹರಿವಂಶ, ಭಾಗವತಗಳಲ್ಲಿ ಸೇರಿ ವಾಸುದೇವ ಕೃಷ್ಣನ ಕಥೆಯಲ್ಲಿ ಹೊಂದಿಕೊಂಡಿವೆ. ದೇವತೆಗಳಾದ ವಿಷ್ಣು, ವಾಸುದೇವ, ಮತ್ತು ಉಪನಿಷತ್ತಿನ ಋಷಿಯಾದ ಕೃಷ್ಣ, ಗೋಪಾಲಕ ವೃತ್ತಿಯವನೂ ಆಭೀರ ಕುಲದೈವವೂ ಆದ ಗೋಪಾಲಕೃಷ್ಣ - ಇವರೆಲ್ಲರ ಕಥೆಗಳೂ ಸೇರಿ

ಈಗಿನ ಕೃಷ್ಣಕಥೆ ರೂಪುಗೊಂಡಿದೆ. ಶ್ರೀ ಕೃಷ್ಣನು ದೇವರೂ ಹೌದು, ಮಾನವನೂ ಹೌದು, ಅವನು ಮತಸ್ಥಾಪಕನೂ ವೇದಾಂತ ವಿಜ್ಞಾನಿಯೂ ಹೌದು, ತಂತ್ರಕುಶಲಿಯಾದ ಕ್ಷತ್ರಿಯನೂ ಹೌದು.



# ಶ್ರೀಕೃಷ್ಣನ ಕಥೆಯಲ್ಲಿ ಇತಿಹಾಸ

ಸುಮಾರು ಮೂರು ಸಾವಿರ ವರ್ಷಗಳ ಹಿಂದೆ ಜೀವಿಸಿದ್ದ ಮಹಾ ಪುರುಷನೊಬ್ಬನ ಕಥೆಯಲ್ಲಿ ಸತ್ಯಯಾವುದು, ಮಿಥ್ಯಯಾವುದು, ಎಂದು ವಿಚಾರ ಮಾಡತೊಡಗುವುದು ಸಾಹಸವೇ ಸರಿ. ಅಲ್ಲದೆ ಶ್ರೀಕೃಷ್ಣನು ಅವತಾರಪುರುಷನಾದ ಧರ್ಮ ಸಂಸ್ಥಾಪಕ; ಭಾರತೀಯರಲ್ಲಿ ಬಹು ಸಂಖ್ಯಾತರಿಗೆ ಆರಾಧ್ಯದೈವ. ಇಂಥ ವ್ಯಕ್ತಿಯ ಕಥೆಯಲ್ಲಿ ಮಹಿಮಾ ನಿರೂಪಕವಾದ ಸಂಗತಿಗಳು, ಅತಿಮಾನುಷ ಸಂಗತಿಗಳು, ಇರುವುದು ಸ್ವಾಭಾವಿಕ. ಈತನ ಕಥೆ ಸಾಮಾನ್ಯ ಮಾನವರ ಜೀವನ ಚರಿತ್ರೆಗಳಂತೆ ಇರುವುದು ಸಾಧ್ಯವಲ್ಲ. ಇದರಲ್ಲಿ ಇತಿಹಾಸ, ಪುರಾಣ, ಕವಿಕಲ್ಪನೆ ಎಲ್ಲವೂ ಸೇರಿ ಹೋಗಿವೆ.

ಮಹಾ ಭಾರತವೇ ಶ್ರೀಕೃಷ್ಣ ಚರಿತ್ರೆಗೆ ಅತ್ಯಂತ ಪ್ರಾಚೀನ ಗ್ರಂಥ. ಆದರೆ ಅದರಲ್ಲಿ ಕೃಷ್ಣನ ಶೈಶವ ಬಾಲ್ಯಗಳ ಕಥೆ ವರ್ಣಿತವಾಗಿಲ್ಲ. ಎಲ್ಲೋ ಕೆಲವು ಸನ್ನಿವೇಶಗಳಲ್ಲಿ ಮಾತ್ರ ಕೃಷ್ಣನ ಬಾಲ್ಯದ ಕಥೆಗೆ ಕೆಲವು ಸೂಚನೆಗಳು ಬರುತ್ತವೆ. ದ್ರೌಪದಿಯು ಕೌರವ ಸಭೆಯಲ್ಲಿ ಅಪಮಾನ ವೊದಗಿದಾಗ ಕೃಷ್ಣನನ್ನು ಪ್ರಾರ್ಥಿಸುತ್ತ ಅವನನ್ನು "ಗೋಪೀಜನಪ್ರಿಯ"[1] ಎಂದು ಕರೆದಿದ್ದಾಳೆ. ಧರ್ಮರಾಯನ ರಾಜಸೂಯ ಯಾಗದ ಕೊನೆಯಲ್ಲಿ ಶಿಶುಪಾಲನು ಕೃಷ್ಣನನ್ನು ಆಕ್ಷೇಪಿಸುತ್ತ ಅವನ ಬಾಲ್ಯಯೌವನಗಳ ಕೆಲವು ಕೃತ್ಯಗಳನ್ನು ಕುರಿತು ಟೀಕಿಸುತ್ತಾನೆ. ಹೀಗೆ ಪ್ರಾಸಂಗಿಕವಾಗಿ ಬರುವ ಒಂದೆರಡು ಸಂಗತಿಗಳ ಹೊರತು ಭಾರತದಲ್ಲಿ ಸಮಗ್ರವಾದ ಕೃಷ್ಣ ಕಥೆಯನ್ನು ಕಾಣಲಾರೆವು. ನಂದಗೋಕುಲ ಮತ್ತು ಬೃಂದಾವನಗಳಲ್ಲಿ ಕೃಷ್ಣನು ಮಾಡಿದ ಸಾಹಸಗಳ ವಿಸ್ತಾರವಾದ ವರ್ಣನೆ ಮಹಾ ಭಾರತದಲ್ಲಿ

1. ಈ ಭಾಗವು ಪ್ರಕ್ಷಿಪ್ತವೆಂದು ಒಂದು ವಾದವಿದೆ.

ಸಿಕ್ಕುವುದಿಲ್ಲ. ಈ ಕೊರತೆಯನ್ನು ನೀಗುವುದಕ್ಕಾಗಿಯೇ ವಿಷ್ಣು ಪುರಾಣ ಭಾಗವತಗಳು ಹುಟ್ಟಿದವು. ಕೃಷ್ಣನ ಬಾಲ್ಯಕಥೆಯನ್ನು ಹೇಳುವ ಈ ಗ್ರಂಥಗಳಲ್ಲಿ ಅನೇಕ ಅಮಾನುಷ ಸಂಗತಿಗಳು ಸೇರಿವೆ. ಕೆಲವುವೇಳೆ ಕೃಷ್ಣನ ದೇವತ್ವವನ್ನು ಸ್ಥಾಪಿಸುವುದಕ್ಕಾಗಿ, ಭಾರತದಲ್ಲಿಲ್ಲದ ಹಲವು ಹೊಸ ಕಲ್ಪನೆಗಳು ಬಂದಿವೆ. ಇನ್ನು ಕೆಲವು ಸಂದರ್ಭಗಳಲ್ಲಿ ಭಾರತದಲ್ಲಿ ಸೂಕ್ಷ್ಮವಾಗಿ ಸೂಚಿತವಾಗಿರುವ ಸಣ್ಣಸಂಗತಿಗಳನ್ನೇ ಲಂಬಿಸಿ ಬೇರೆ ರೀತಿಯಾಗಿ ಬರೆದಿರುವಂತೆ ತೋರುತ್ತದೆ.

ಮಧುರಾನಗರದಲ್ಲಿ ಕಂಸಾಸುರನು ಬಹಳ ನೀಚನಾಗಿ ತನ್ನ ತಂದೆಯನ್ನೇ ಸೆರೆಯಲ್ಲಿಟ್ಟು, ತಾನೇ ಸಿಂಹಾಸನವನ್ನು ಆಕ್ರಮಿಸಿಕೊಂಡನು. ಆಗ ಉಗ್ರಸೇನನ ಅಭಿಮಾನಿಗಳು ಸಹಜವಾಗಿ ಕಂಸನ ಆಗ್ರಹಕ್ಕೆ ಪಾತ್ರರಾದರು. ವಸುದೇವನಂಥ ಪಾಪಭೀರುವು ಕಂಸನ ಸ್ನೇಹಿತನಾಗುವುದು ಶಕ್ಯವಲ್ಲ. ಆದ್ದರಿಂದ ಅವನು ಅಂಜಿ ತನ್ನ ಹೆಂಡತಿ ರೋಹಿಣಿಯನ್ನು ನಂದಾಲಯದಲ್ಲಿ ಬಿಟ್ಟಿದ್ದನು. ತನ್ನ ಮಗನಾದ ಕೃಷ್ಣನನ್ನೂ ಬಹಳ ಚಿಕ್ಕವಯಸ್ಸಿನಲ್ಲಿಯೇ ನಂದಾಲಯದಲ್ಲಿರಿಸಿದ್ದನೆಂದು ತೋರುತ್ತದೆ. ನಂದಾದಿಗಳು ಕೂಡ ಕಂಸನ ದೌರ್ಜನ್ಯಕ್ಕೆ ಹೆದರಿಕೊಂಡು ಮಧುರೆಯನ್ನು ಬಿಟ್ಟು ಬೇರೆ ಕಡೆ ವಾಸವಾಗಿದ್ದವರು. ಇದು ಬಹುಶಃ ಕೃಷ್ಣ ಜನನ ವೃತ್ತಾಂತದ ಐತಿಹಾಸಿಕ ಅಂಶ. ಇದನ್ನೇ ಆಧಾರವಾಗಿಟ್ಟುಕೊಂಡು ಪುರಾಣಕಾರರು ದೇವಕೀ ವಸುದೇವರನ್ನು ಕಂಸನು ಆಕಾಶವಾಣಿಯ ಪ್ರೇರಣೆಯಂತೆ ಸೆರೆಯಟ್ಟಿದ್ದನೆಂದೂ ದೇವಕಿಯ ಹೊಟ್ಟೆಯಲ್ಲಿ ಹುಟ್ಟಿದ್ದ ಬಲರಾಮನನ್ನು ರೋಹಿಣಿಯ ಗರ್ಭಕ್ಕೆ ವರ್ಗಾಯಿಸಲಾಯಿತೆಂದೂ ಕೃಷ್ಣನು ಹುಟ್ಟಿದೊಡನೆಯೇ ಚತುರ್ಭುಜನೂ ಶಂಖಚಕ್ರಗದಾಧರನೂ ಆದ ಮಹಾ ವಿಷ್ಣುವಿನಂತೆ ಕಾಣಿಸಿಕೊಂಡು ತನ್ನನ್ನು ಗೋಕುಲಕ್ಕೆ ಸಾಗಿಸಬೇಕೆಂದು ಹೇಳಿ ದೇವಕೀ ವಸುದೇವರು ಸ್ತೋತ್ರಮಾಡಿದ ಮೇಲೆ ಶಿಶುರೂಪವನ್ನು ಧರಿಸಿದನೆಂದೂ ಕಥೆಕಟ್ಟಿರಬೇಕು. ಯಮುನೆಯು ವಸುದೇವನಿಗೆ ದಾರಿಬಿಟ್ಟಿತಂತೆ-ದೇವ ಶಿಶು ಅವನ ಮಡಿಲಲ್ಲಿದ್ದುದರಿಂದ! ಮಗುವಿಗೆ

ಮಳೆ ಹನಿ ಬೀಳದಂತೆ ಆದಿಶೇಷನೇ ಬಂದು ತನ್ನ ಹೆಡೆಗಳಿಂದ ಕೊಡೆ ಹಿಡಿದನು !

ಕೃಷ್ಣನು ನಂದಾಲಯದಲ್ಲಿದ್ದಾಗ ಅವನನ್ನು ಕೊಲ್ಲಿಸಬೇಕೆಂದು ಕಂಸನು ಹಲವರು ರಾಕ್ಷಸರನ್ನು ಕಳುಹಿಸಿದನು. ಅಂಥವರಲ್ಲಿ ಪೂತನಿ ಮೊದಲನೆಯವಳು. ಶಿಶುಗಳಿಗೆ ಮೃತ್ಯುಸ್ವರೂಪಳಾದ ಪೂತನಿಯು ಕಂಸನ ಆಜ್ಞೆಯಂತೆ ಸುಂದರರೂಪವನ್ನು ಧರಿಸಿ ಗೋಕುಲಕ್ಕೆ ಹೋಗಿ ಕೃಷ್ಣನನ್ನು ಕೊಲ್ಲುವಸಲುವಾಗಿ ಅವನಿಗೆ ಸ್ತನ್ಯಪಾನಮಾಡಿಸಿದಳು. ಇವಳ ದುರುದ್ದೇಶವನ್ನು ತಿಳಿದ ಕೃಷ್ಣನು ಸ್ತನ್ಯದೊಡನೆ ಅವಳ ಜೀವ ವನ್ನೂ ಹೀರಿಬಿಟ್ಟನು ! ಅವಳು ಆಗ ತನ್ನ ಮಾಯಾರೂಪವನ್ನು ಕಳೆದು ಕೊಂಡು ತನ್ನ ಎಂದಿನ ಭಯಂಕರ ಬೃಹದಾಕಾರವನ್ನು ತಾಳಿ ಬಿದ್ದು ಬಿಟ್ಟಳು. ಇದು ಪೂತನಿಯ ಪುರಾಣ ಕಥೆ.

ಪೂತನಾ ಎಂಬುದು ಎಳೆಯ ಮಕ್ಕಳಿಗೆ ಬರಬಹುದಾದ ಒಂದು ರೋಗಕ್ಕೆ ಹೆಸರು. ಆ ರೋಗದ ಸ್ವರೂಪವನ್ನೂ ಅದಕ್ಕೆ ಮಾಡಬೇಕಾದ ಚಿಕಿತ್ಸೆಯನ್ನೂ ಶುಶ್ರುತದಲ್ಲಿ ವಿಸ್ತಾರವಾಗಿ ಹೇಳಿದೆ. ಬಹುಶಃ ಕೃಷ್ಣನು ಎಳೆಯ ಮಗುವಾಗಿದ್ದಾಗ ಈ ರೋಗವು ಬಂದು ವಾಸಿಯಾಗಿದ್ದಿರ ಬಹುದು. ಅದನ್ನೇ ಕವಿಗಳು ತಮ್ಮ ಪ್ರತಿಭೆಗೆ ತಕ್ಕಂತೆ ಬೆಳೆಸಿ ಹೇಳಿರ ಬಹುದು. ಮಹಾ ಭಾರತದಲ್ಲಿ ಪೂತನಿಯ ಕೊಲೆಯ ಪ್ರಸಂಗದ ಸೂಚನೆಯಿದೆ. ಶಿಶುಪಾಲನು ಕೃಷ್ಣನನ್ನು ಹೀಯಾಳಿಸುವಾಗ ಪೂತ ನಿಯ ಕೊಲೆಯ ಕಥೆಯನ್ನೇ ಉದ್ದೇಶಿಸಿ 'ಶಕುನಿ' ಯ ಕೊಲೆಮಾಡಿದವ ನೆಂದು ನುಡಿದಿದ್ದಾನೆ. ಶಕುನಿಯೆಂದರೆ ಹಕ್ಕಿ. ಬಲಶಾಲಿಯಾದ ಮಗುವು ಹಕ್ಕಿಯೊಂದನ್ನು ಕೊಲ್ಲುವುದರಲ್ಲಿ ಅಗಾಧವೇನೂ ಇಲ್ಲ.

ಮಹಾ ಭಾರತದಲ್ಲಿ 'ಹಕ್ಕಿ' ಮಾತ್ರವಾಗಿರುವ ಪೂತನಿಯು ವಿಷ್ಣುಪುರಾಣದಲ್ಲಿ ಬಾಲಘಾತಿನಿಯಾದ ಹೆಂಗಸು. ಹರಿವಂಶದಲ್ಲಿ, ಮಹಾಭಾರತ ಮತ್ತು ವಿಷ್ಣು ಪುರಾಣಗಳ ಕಥೆಗಳೆರಡೂ ಸೇರಿದ ಹಾಗೆ ತೋರುತ್ತದೆ. ಅದರಲ್ಲಿ ಪೂತನಿಯು 'ಕಂಸಧಾತ್ರಿ.' ಕಾಮರೂಪಿಣಿ

ಯೂದ ಆ ಹೆಂಗಸು ಗೋಕುಲಕ್ಕೆ ಹಕ್ಕಿಯ ರೂಪದಲ್ಲಿ ಹೋಗುತ್ತಾಳೆ! ಬ್ರಹ್ಮವೈವರ್ತ ಪುರಾಣವು ಪೂತನಿಯು 'ಕಂಸನ ಭಗಿನಿ' ಯೆಂದೂ ಅವಳು ಮಧುರೆಯಿಂದ ಬ್ರಾಹ್ಮಣ ಸ್ತ್ರೀಯ ವೇಷ ಧರಿಸಿ ಗೋಕುಲಕ್ಕೆ ಹೋದಳೆಂದೂ ಹೇಳುತ್ತದೆ.

ಭಾಗವತದಲ್ಲಿ ಪೂತನಿಯು ಧಾತ್ರಿಯೂ ಅಲ್ಲ, ಕಂಸಭಗಿನಿಯೂ ಅಲ್ಲ. ಅವಳು ಶಿಶುಗಳಿಗೆ ಮೃತ್ಯು ಸ್ವರೂಪಳಾದ ಕರಾಳರಕ್ಕಸಿ. ಅವಳು ಕೃಷ್ಣನಿಗೆ ಸ್ತನ್ಯಪಾನ ಮಾಡಿಸಿ ಸತ್ತು ಬಿದ್ದಾಗ ಆದ ಅನರ್ಥ ವನ್ನು ಗಮನಿಸಿ

ದುಷ್ಟರಕ್ಕಸಿ ಯೊಡಲು ಬೀಳುತ
ನೆಟ್ಟನೊಂದರೆಗಾವುದಂತರ
ವಿಟ್ಟೆಡೆಯ ಗಿಡಬಳ್ಳಿ ಮರಗಳನೊರಸಿ ವನದೊಳಗೆ
ಹುಟ್ಟಿದನಿತುವನೆಲ್ಲವನು ಹುಡಿ
ಗುಟ್ಟಿಬಿದ್ದುದು ಭೂಪ ವಜ್ರದ
ಲಿಟ್ಟು ಕೆಡಹಿದ ವೃತ್ರನೊಡಲೀಧರೆಗೆ ಬೀಳ್ವಂತೆ

ಕೊನೆಗೆ, ಅವಳ ಶವವನ್ನು ಅಖಂಡವಾಗಿ ಸಾಗಿಸಲು ಸಾಧ್ಯವಾಗದೆ ಅದನ್ನು ಕಡಿಕಡಿದು ಬಂಡಿಗಳಲ್ಲಿ ತುಂಬಿ ಸಾಗಿಸಬೇಕಾಯಿತು! ಆ ಶವ ದಹನಕ್ಕೋಸ್ಕರ ಸುತ್ತಮುತ್ತಲಿನ ಕಾಡನ್ನೆಲ್ಲ ಕತ್ತರಿಸಿ ಒಟ್ಟಬೇಕಾಯಿತು. ದಟ್ಟವಾದ ಕಾಡೆಲ್ಲ ಬಯಲಾಗಲು ದನಗಳಿಗೆ ಮೇವು ಸಿಕ್ಕದೆ ಗೋಪರು ತಮ್ಮ ವಾಸಕ್ಕೆ ಬೇರೊಂದು ಪ್ರದೇಶವನ್ನು ಹುಡುಕಿಕೊಳ್ಳಬೇಕಾಯಿತು! ಅಂತು, ಎಳೆಯ ಮಕ್ಕಳಿಗೆ ಸಾಮಾನ್ಯವಾಗಿ ಬರಬಹುದಾದ ಒಂದು ರೋಗವು ಕ್ರಮಕ್ರಮವಾಗಿ ಬೆಳೆದು ನಮ್ಮ ಭಾಗವತಕಾರನ ಕೈಯಲ್ಲಿ ದೊಡ್ಡ ರಕ್ಕಸಿಯಾಗಿಬಿಟ್ಟದೆ.

ಮಹಾವಿಷ್ಣುವಿನ 'ದಾಮೋದರ' ಎಂಬ ಹೆಸರನ್ನು ಮನಸ್ಸಿನಲ್ಲಿಟ್ಟು ಕೊಂಡು ಭಾಗವತದಲ್ಲಿ ಒಂದು ಕಥೆ ಸೃಷ್ಟಿಯಾಗಿದೆ. ಒಂದು ದಿನ ಕೃಷ್ಣನು ಬಹಳವಾಗಿ ಪೀಡಿಸಿದುದರಿಂದ ಬೇಸರಗೊಂಡು ಯಶೋದೆಯು

ಅವನ ಸೊಂಟಕ್ಕೆ ಹಗ್ಗ ಬಿಗಿದು ಒಂದು ಒರಳಿಗೆ ಆ ಹಗ್ಗವನ್ನು ಕಟ್ಟಿದಳಂತೆ. ಮೊದಲು ಎಷ್ಟು ಹಗ್ಗವಾದರೂ ಕೃಷ್ಣನನ್ನು ಕಟ್ಟಲು ಸಾಲಲೇ ಇಲ್ಲ! ಕೊನೆಗೆ ದಯಾಮಯನಾದ ಲೀಲಾವತಾರ ಶ್ರೀಕೃಷ್ಣನೇ ಕನಿಕರಿಸಿ ಕಟ್ಟಿಗೊಳಗಾದನು. ಹೀಗೆ ದಾಮ (ಹಗ್ಗ) ದಿಂದ ಉದರ (ಹೊಟ್ಟೆ) ಕ್ಕೆ ಕಟ್ಟಿಸಿಕೊಂಡದ್ದರಿಂದ ಅವನಿಗೆ ದಾಮೋದರನೆಂದು ಹೆಸರಾಯಿತೆಂದು ಕಥೆ. ಆದರೆ ಮಹಾ ಭಾರತದಲ್ಲಿ "ದಮಾದ್ದಾಮೋದ ರೋವಿದುಃ" ಎಂದು ಹೇಳಿದೆ. ದಮ, (ಇಂದ್ರಿಯನಿಗ್ರಹ) ವಿರುವುದ ರಿಂದ ದಾಮೋದರ ನೆನಿಸಿದನೆಂದು ಇಲ್ಲಿನ ತಾತ್ಪರ್ಯ. "ದಮಾದಿ ಸಾಧ ನೇನ ಉದರ ಉತ್ಕೃಷ್ಟಾಗತಿರ್ಯಾತಯಾಗಮ್ಯತಿ ಇತಿ ದಾಮೋದರಃ" 'ಉದರ' ಎಂದರೆ ಉತ್ಕೃಷ್ಟಗತಿಯೆಂದರ್ಥ. ದಮದಿಂದ ಉತ್ಕೃಷ್ಟಗತಿ ಯನ್ನು ಪಡೆದವನು ದಾಮೋದರ. ವೇದಕಥೆಗಳಲ್ಲಿ ವಿಷ್ಣುವು ಇಂದ್ರನಿ ಗಿಂತ ಕಡಿಮೆ ಅಂತಸ್ತಿನವನು. ಆದರೆ ಅವನು ತಪಸ್ಸಿನಿಂದ ಪ್ರಾಶಸ್ತ್ಯ ವನ್ನು ಹೊಂದಿದನು. ವಿಷ್ಣುವಿಗೇ ದಾಮೋದರನೆಂಬ ಹೆಸರಿತ್ತು. ಆದ್ದರಿಂದ ಭಾಗವತಕಾರನು ದಾಮೋದರನೆಂಬ ಹೆಸರನ್ನೇ ಆಧಾರ ವಾಗಿಟ್ಟುಕೊಂಡು ಈ ಕಥೆ ಕಟ್ಟಿರಬೇಕೆಂದು ಭಾವಿಸಿದರೆ ತಪ್ಪಾಗಲಾರದು.

ಇದರಂತೆಯೇ 'ಉಪೇಂದ್ರ' ಎಂಬ ಇನ್ನೊಂದು ಹೆಸರಿಗೆ ತಕ್ಕಂತೆ ಒಂದು ಕಥೆಯನ್ನು ಕಲ್ಪಿಸಲಾಗಿದೆ. 'ಉಪೇಂದ್ರ' ಎಂಬುದು ಮಹಾ ವಿಷ್ಣುವಿನ ಹೆಸರುಗಳಲ್ಲೊಂದು. ಉಪೇಂದ್ರನೆಂದರೆ ಇಂದ್ರನಿಗಿಂತ ಚಿಕ್ಕವನು ಅಥವಾ ಚಿಕ್ಕ ಇಂದ್ರನೆಂದು ಅರ್ಥವಾಗಬೇಕು. ವೇದ ಯುಗ ದಲ್ಲಿ ವಿಷ್ಣುವು ಇಂದ್ರನಿಗಿಂತ ಚಿಕ್ಕವನೇ ಸರಿ. ವಿಷ್ಣು ಕೃಷ್ಣರು ಒಂದಾದ ಮೇಲೆ ಅವನ 'ಉಪೇಂದ್ರ' ತ್ವವು ಕೃಷ್ಣನಿಗೂ ಬರಬೇಕಾಯಿತು. ಆದರೆ ಕೃಷ್ಣನೇ ಪರದೈವವೆಂದು ನಂಬಿದ ಭಕ್ತರು ಈ ಮಾತನ್ನು ಒಪ್ಪಲು ಸಾಧ್ಯವಲ್ಲ. ಆದ್ದರಿಂದ "ಇಂದ್ರಾದುಪರಿ ಉಪೇಂದ್ರಃ" ಎಂದು ಒಂದು ವಿಚಿತ್ರವಾದ ವ್ಯುತ್ಪತ್ತಿಯನ್ನು ಕಲ್ಪಿಸಬೇಕಾಯಿತು. ಕೃಷ್ಣನು ಇಂದ್ರನನ್ನು ಸೋಲಿಸಿದಾಗ ಅವನಿಗೆ 'ಉಪೇಂದ್ರ' ನೆಂಬ ಹೆಸರು ಬಂದಿತೆಂದು ಹೇಳಿರು

ವುದರಿಂದ ಈ ವ್ಯುತ್ಪತ್ತಿಗೆ ಬಲಸಿಕ್ಕಿದಂತಾಯಿತು. ನಂದಾದಿಗೋಪಾಲಕರು ಮಾಡುತ್ತಿದ್ದ ಇಂದ್ರಯಜ್ಞವನ್ನು ಕೃಷ್ಣನು ನಿಲ್ಲಿಸಿದ್ದರಿಂದ ಸಿಟ್ಟುಗೊಂಡು ಇಂದ್ರನು ಬಹಳ ಬಿರುಸಾದ ಮಳೆ ಸುರಿಸಲು ಗೋವರ್ಧನ ಪರ್ವತವನ್ನೇ ಕೊಡೆಯಂತೆ ಎತ್ತಿಹಿಡಿದು ಕೃಷ್ಣನು ಇಂದ್ರನ ಅಹಂಕಾರವನ್ನು ಮುರಿದನೆಂದೂ ಕಡೆಗೆ ಇಂದ್ರನೇ ಶರಣಾಗತನಾದನೆಂದೂ ಶರಣಾಗತವತ್ಸಲನಾದ ಕೃಷ್ಣನು ಅಂದಿನಿಂದ 'ಉಪೇಂದ್ರ' ಎಂಬ ಹೆಸರಿಟ್ಟುಕೊಂಡನೆಂದೂ ಕಥೆ.

ಗೋಕುಲದ ಕೃಷ್ಣನ ಪರಾಕ್ರಮದ ಕಥೆಗಳನ್ನು ಕೇಳಿದ ಕಂಸನು ಗಾಬರಿಗೊಂಡು ಹೇಗಾದರೂ ಮಾಡಿ ಕೃಷ್ಣನನ್ನು ಕೊಲ್ಲಿಸಬೇಕೆಂಬ ಸಂಕಲ್ಪದಿಂದ ಅವನನ್ನು ಮಧುರೆಗೆ ಕರೆತರಲು ಅಕ್ರೂರನನ್ನು ಕಳುಹಿಸಿದನು. ಬಿಲ್ಲ ಹಬ್ಬಕ್ಕೆ ಬರಬೇಕೆಂದು ಕಂಸನು ಭಕ್ತಶಿರೋಮಣಿಯಾದ ಅಕ್ರೂರನ ಮೂಲಕ ಕಳುಹಿಸಿದ ಆಹ್ವಾನವನ್ನು ಅಂಗೀಕರಿಸಿ ಕೃಷ್ಣ ಬಲರಾಮರು ಗೋಪಾಲಕರೊಡನೆ ಮಧುರೆಗೆ ಬಂದು ಅವರಿಗಾಗಿ ಮಧುರೆಯಲ್ಲಿ ಸಿದ್ಧವಾಗಿ ಕಾದಿದ್ದ 'ಕುವಲಯಾ ಪೀಡ' ಎಂಬ ಆನೆ, ಚಾಣೂರ ಮತ್ತು ಮುಷ್ಟಿಕ ಮೊದಲಾದ ಜಟ್ಟಿಗಳು ಮುಂತಾದವರೆಲ್ಲರನ್ನೂ ಲೀಲಾಜಾಲವಾಗಿ ಕೊಂದು ಕಡೆಗೆ ಇಷ್ಟೆಲ್ಲ ಅನರ್ಥಗಳಿಗೆ ಕಾರಣನಾದ ಕಂಸನನ್ನೂ ವಧಿಸಿ ಅವನ ತಂದೆ ಉಗ್ರಸೇನನಿಗೆ ರಾಜ್ಯವನ್ನು ಕೊಡಿಸಿದರು.

ಅಂದಿನಿಂದ ಯಾದವರ ಗುಂಪಿನಲ್ಲಿ ಶ್ರೀಕೃಷ್ಣನಿಗೆ ಬಹಳ ಗಣ್ಯತೆಯುಂಟಾಯಿತು. ಅವನು ಮಧುರೆಯಲ್ಲಿಯೇ ಇದ್ದು ಶತ್ರುಗಳಿಂದ ಆ ನಗರಕ್ಕೆ ಹಲವು ಬಾರಿ ಒದಗಿದ ವಿಪತ್ತುಗಳನ್ನು ನಿವಾರಿಸಿದನು. ಶತ್ರುಪಕ್ಷವು ಬಹಳ ಬಲಯುತವಾಗಲು ಕೃಷ್ಣನು ತನ್ನವರಾದ ಯಾದವರನ್ನು ಜತೆಯಲ್ಲಿ ಕರೆದುಕೊಂಡು ಪಶ್ಚಿಮ ಸಾಗರದ ಕಡೆ ಓಡಿಹೋಗಿ ಅಲ್ಲಿ ದ್ವಾರಕಾಪಟ್ಟಣವನ್ನು ಕಟ್ಟಿದನು. ಅದೇ ಯಾದವರ ಹೊಸ ರಾಜಧಾನಿಯಾಯಿತು.

ಅನಂತರ ಕೃಷ್ಣನು ಪಾಂಡವರ ಸ್ನೇಹಿತನಾಗಿ ಅವರಿಗೆ ಹಲವು

ವಿಧಗಳಲ್ಲಿ ಸಹಾಯಮಾಡುತ್ತಾನೆ; ಅವರ ಸಹಾಯದಿಂದ ತನ್ನ ಪರಮ ಶತ್ರುವಾದ ಜರಾಸಂಧನನ್ನು ನಿಗ್ರಹಿಸುತ್ತಾನೆ. ಧರ್ಮರಾಯನ ರಾಜ ಸೂಯ ಯಾಗದ ಸಂದರ್ಭದಲ್ಲಿ ಶಿಶುಪಾಲನನ್ನು ತಾನೇ ಕೊಲ್ಲುತ್ತಾನೆ. ಹೀಗೆ ಹಲವರು ರಾಕ್ಷಸರನ್ನು ಕೊಂದು ದಾನವಾಂತಕನೆಂಬ ಕೀರ್ತಿಯನ್ನು ಪಡೆದು ಧರ್ಮ ಸಂರಕ್ಷಣೆ ಮಾಡುತ್ತ ದ್ವಾರಕಿಯಲ್ಲಿ ನೂರಿಪ್ಪತ್ತೈದು ವರ್ಷ ಬಾಳುತ್ತಾನೆ. ಅನಂತರ ಯಾದವರ ಅಂತಃಕಲಹವನ್ನೂ ಕಡೆಗೆ ದ್ವಾರಕೆಯ ವಿನಾಶವನ್ನೂ ನೋಡುತ್ತಾನೆ. ಕಡೆಯಲ್ಲಿ ಜರಸ್ ಎಂಬ ಬೇಟೆಗಾರನು ಕೃಷ್ಣನು ವನದಲ್ಲಿ ಮಲಗಿದ್ದಾಗ ಬಣ್ಣದ ಜಿಂಕೆಯೆಂದು ಭ್ರಾಂತಿಪಟ್ಟು ಅವನ ಕಾಲಿಗೆ ಗುರಿಯಿಟ್ಟು ಬಾಣ ಹೊಡೆದುಕೊಲ್ಲುತ್ತಾನೆ. 'ಜರೆ' (ಮುದಿತನ) ಯಿಂದ ಸತ್ತನೆಂದು ಹೇಳುವ ಬದಲು ಇಲ್ಲಿ ಆ ಹೆಸರಿನ ಬೇಟೆಗಾರನೊಬ್ಬನನ್ನು ಕಲ್ಪಿಸಿದಂತೆ ತೋರುತ್ತದೆ.

ಇದು ಪುರಾಣ ಮತ್ತು ಮಹಾಭಾರತಗಳಲ್ಲಿರುವ ಶ್ರೀಕೃಷ್ಣ ಕಥೆಯ ಸಾರಾಂಶ. ಮಹಾಭಾರತದಲ್ಲಿ ಶ್ರೀಕೃಷ್ಣನ ಶೈಶವ ಬಾಲ್ಯಗಳ ವೃತ್ತಾಂತ ವಿಲ್ಲ. ಪುರಾಣಗಳಲ್ಲಿ ಭಾರತ ಯುದ್ಧ, ಗೀತೋಪದೇಶ ಮುಂತಾದ ಕಥಾ ಭಾಗಗಳಿಲ್ಲ. ಭಾಗವತದಲ್ಲಿ ಕೃಷ್ಣನ ಸಮಗ್ರಕಥೆ ದೊರೆಯುವುದಾದರೂ ಬಾಲ್ಯದ ಕಥೆಗೇ ಹೆಚ್ಚಿನ ಪ್ರಾಶಸ್ತ್ಯ. ಭಾಗವತ ಹರಿವಂಶಗಳು ರಚಿತ ವಾಗುವ ವೇಳೆಗೆ ವಿಷ್ಣುವೇ ಪರದೈವವೆಂದು ನಂಬುವ ಧರ್ಮವೊಂದು ದೇಶ ದಲ್ಲಿ ವ್ಯಾಪಿಸಿದ್ದುದರಿಂದ ಇವುಗಳಲ್ಲಿ ವಿಷ್ಣು, ಮತ್ತು ಕೃಷ್ಣ ಮಹಿಮಾ ಪ್ರದರ್ಶಕವಾದ ಅನೇಕ ಕಥೆಗಳು ಸೇರಿಕೊಂಡಿವೆ.

## ರಾಧೆ

ಶ್ರೀಕೃಷ್ಣನಿಗೆ ಪರಮಪ್ರಿಯಳೆನಿಸಿದ ರಾಧೆಯೆಂಬ ಹೆಸರಿನ ಗೋಪಿಕಾ ಸ್ತ್ರೀಯ ವೃತ್ತಾಂತವು ವಿಷ್ಣುಪುರಾಣದಲ್ಲಿಯಾಗಲಿ ಭಾಗವತದಲ್ಲಿ ಯಾಗಲಿ ಇಲ್ಲ; ಮಹಾಭಾರತ, ಹರಿವಂಶಗಳಲ್ಲಿಯೂ ಇಲ್ಲ. ಆದರೆ ಇಂದು ಜನಮಾನ್ಯವಾದ ಕೃಷ್ಣಕಥೆಯಲ್ಲಿ ರಾಧೆ ಸುಪ್ರತಿಷ್ಠಿತಳಾಗಿದ್ದಾಳೆ.

'ರಾಧಾ ಮಾಧವ' ರೆಂದು ಆಕೆಯ ಹೆಸರನ್ನು ದೇವರ ಹೆಸರಿನೊಂದಿಗೇ ಸೇರಿಸಿಹೇಳುವುದಲ್ಲದೆ ಕೃಷ್ಣಭಕ್ತರು ರಾಧೆಯ ಪೂಜೆಯನ್ನೂ ಬಹಳ ಭಕ್ತಿಯಿಂದ ಮಾಡುತ್ತಾರೆ. ಜಯದೇವ ಕವಿಯು ತನ್ನ 'ಗೀತಗೋವಿಂದ' ದಲ್ಲಿ ರಾಧಾಕೃಷ್ಣರ ಪ್ರೇಮವನ್ನು ವರ್ಣಿಸಿದ್ದಾನೆ. ಬಹುಶಃ ಆತನಿಗಿಂತ ಮುಂಚೆ, ಬ್ರಹ್ಮ ವೈವರ್ತ ಪುರಾಣದಲ್ಲಿ ಈ ಕಥೆ ಬಂದಿದೆ. ಮೂಲ ಬ್ರಹ್ಮ ವೈವರ್ತ ಪುರಾಣವು ನಷ್ಟವಾಗಿ ಹೋಗಿದೆಯೆಂದೂ ಈಗ ಆ ಹೆಸರಿನಲ್ಲಿ ಪ್ರಸಿದ್ಧವಾಗಿರುವ ಗ್ರಂಥವು ಆಧುನಿಕವಾದುದೆಂದೂ ಒಂದು ಮತವಿದೆ. ಈ ಪುರಾಣದಲ್ಲಿ ಬ್ರಹ್ಮಕಾಂಡ, ಪ್ರಕೃತಿಕಾಂಡ, ಗಣೇಶಕಾಂಡ ಮತ್ತು ಕೃಷ್ಣ ಜನ್ಮಕಾಂಡ ಎಂಬ ನಾಲ್ಕು ಕಾಂಡಗಳಿವೆ. ಮೊದಲನೆಯದರಲ್ಲಿ ಬ್ರಹ್ಮಸೃಷ್ಟಿ ವೃತ್ತಾಂತವಿದೆ. ಇಲ್ಲಿ ಕೃಷ್ಣನೇ ಪರಬ್ರಹ್ಮನೆಂಬ ಸೂಚನೆಯಿದೆ. ಮೂರನೆಯದಾದ ಗಣೇಶಕಾಂಡದಲ್ಲಿ ಗಣೇಶನೂ ಕೃಷ್ಣನ ಅವತಾರವೆಂದು ಹೇಳಿದೆ. ಕೊನೆಯದೇ ಮುಖ್ಯವೂ ವಿಸ್ತಾರವೂ ಆದ ಭಾಗ. ಇದರಲ್ಲಿ ಕೃಷ್ಣ ಜನನದ ಕಥೆಯು ಮಾತ್ರವೇ ಅಲ್ಲದೆ ಕೃಷ್ಣಚರಿತ್ರೆಯೆಲ್ಲವೂ ವರ್ಣಿತವಾಗಿದೆ. ರಾಧೆಯ ಚರಿತ್ರೆ ಇದರಲ್ಲಿದೆ.

ಈ ಪುರಾಣದ ಪ್ರಕಾರ ಕೃಷ್ಣನೇ ವಿಷ್ಣುವನ್ನು ಸೃಷ್ಟಿಮಾಡಿದವನು' ಅವನು ವಿಷ್ಣುವಿನ ಅವತಾರವಲ್ಲ. ವಿಷ್ಣುಲೋಕಕ್ಕೂ ಮೇಲೆ 'ಗೋಲೋಕ; ಎಂಬ ಹೆಸರಿನ ಇನ್ನೊಂದು ಲೋಕವಿದೆ. ಅದು ಕೃಷ್ಣಪರಬ್ರಹ್ಮನ ವಾಸಸ್ಥಾನ. ಅಲ್ಲಿ ಕೃಷ್ಣನು ರಾಧೆಯೊಡನೆ ಇರುತ್ತಾನೆ. ರಾಧೆ ಕೃಷ್ಣನ ಶಕ್ತಿ. ಶ್ರೀದಾಮನೆಂಬ ಕೃಷ್ಣನ ಸ್ನೇಹಿತನೊಬ್ಬನು ರಾಧೆಗೆ ಶಾಪಕೊಟ್ಟುದರಿಂದ ಅವಳು ಭೂಲೋಕದಲ್ಲಿ ಗೊಲ್ಲತಿಯಾಗಿ ಹುಟ್ಟಬೇಕಾಯಿತು. ಆಗ ಅವಳಿಗೋಸ್ಕರ ಕೃಷ್ಣನೂ ಭೂಮಿಯ ಮೇಲೆ ಜನ್ಮ ತಾಳಬೇಕಾಯಿತು. ಗೋಲೋಕದಲ್ಲಿ ಕೃಷ್ಣನ ಜತೆಯಲ್ಲಿ ಅನೇಕ ಗೋಪಗೋಪಿಯರಿದ್ದಾರೆ. ಅವರು ಮಿಕ್ಕೆಲ್ಲ ದೇವ ದೇವತೆಗಳಿಗೂ ಮಿಗಿಲು. ರಾಧೆಯೇ ಗೋಲೋಕ ಧಾಮಕ್ಕೆ ಅಧಿದೇವತೆ.

ಶ್ರೀದಾಮನ ಶಾಪನಿಮಿತ್ತದಿಂದ ಭೂಲೋಕದಲ್ಲಿ ಗೊಲ್ಲರಾಗಿ ಹುಟ್ಟಿದ ರಾಧಾಕೃಷ್ಣರು ಗೋಕುಲದಲ್ಲಿ ನಡೆಸಿದ ಲೀಲೆಗಳನ್ನು ಬ್ರಹ್ಮ ವೈವರ್ತ ಪುರಾಣದಲ್ಲಿ ಬಹಳ ವಿಸ್ತಾರವಾಗಿ ವರ್ಣಿಸಿದೆ. ರಾಧೆಯೇ ಮೊದಲು ಭೂಲೋಕದಲ್ಲಿ ಹುಟ್ಟಿದ್ದರಿಂದ ಅವಳು ಕೃಷ್ಣನಿಗಿಂತ ದೊಡ್ಡ ವಳು. ಬಾಲಕನಾದ ಕೃಷ್ಣನನ್ನು ಕರೆದುಕೊಂಡು ಒಂದು ದಿನ ನಂದನು ಕಾಡಿನಲ್ಲಿ ಗೋವುಗಳನ್ನು ಕಾಯುತ್ತಿರುವಾಗ ಇದ್ದಕ್ಕಿದ್ದಹಾಗೆ ಮೇಘಗಳು ಗರ್ಜಿಸತೊಡಗಿದುವು. ಬಿರುಮಳೆ ಬೀಳತೊಡಗಿತು. ಆಗ ಚಳಿಯಲ್ಲಿ ಹಿಂಸೆಪಡುತ್ತ ನಂದನು ಶಿಶು ಕೃಷ್ಣನನ್ನು ಎದೆಗಪ್ಪಿಕೊಂಡು ಹೇಗೋ ಸಂತೈಸುತ್ತಿದ್ದನು. ಆಗ ಯುವತಿಯಾದ ರಾಧೆಯು ಅಲ್ಲಿಗೆ ಬಂದಳು. ಅವಳ ದೈವೀ ಲಾವಣ್ಯವನ್ನು ಕಂಡು ನಂದನು ಅವಳು ಸಾಕ್ಷಾತ್ ವಿಷ್ಣು ಮಾಯೆಯೆಂದೇ ಭಾವಿಸಿ ಕೃಷ್ಣನನ್ನು ಅವಳಿಗೆ ಒಪ್ಪಿಸಿದನು. ಒಡನೆಯೇ ರಾಧೆ ಕೃಷ್ಣ ಸಮೇತಳಾಗಿ ರಾಸ ಮಂಡಲವನ್ನು ಸ್ಮರಿಸಿಕೊಳ್ಳಲು ನಯನ ಮನೋಹರವಾದ ವಿಹಾರ ಭೂಮಿ ಏರ್ಪಟ್ಟಿತು. ಆಗ ಕೃಷ್ಣನಿಗೂ ಹೊಸ ಪ್ರಾಯಬಂದಿತು. ಆ ವೇಳೆಗೆ ಬ್ರಹ್ಮನು ಅಲ್ಲಿಗೆ ಬಂದು ತಾನೇ 'ಕನ್ಯಾ ದಾತ'ನಾಗಿ ರಾಧಾಕೃಷ್ಣರಿಗೆ ಶಾಸ್ತ್ರೋಕ್ತವಾಗಿ ಮದುವೆ ಮಾಡಿಸಿದನು. ವಿವಾಹಾನಂತರ ರಾಧಾಕೃಷ್ಣರು ಒಂದು ತಿಂಗಳ ಕಾಲ ಲೀಲಾಮಗ್ನ ರಾಗಿದ್ದುಬಿಟ್ಟರು.

ರಾಧೆಯ ವೃತ್ತಾಂತವು ಬ್ರಹ್ಮ ವೈವರ್ತ ಪುರಾಣ ಹೊರತು ಇನ್ನಾವು ದರಲ್ಲಿಯೂ ಇಲ್ಲದಿರುವುದರಿಂದಲೂ, ಜಯದೇವ ಕವಿಗಿಂತ ಮೊದಲಿನ ಯಾವ ಕವಿಗೂ ಇದು ತೋರದಿರುವುದರಿಂದಲೂ ಸುಮಾರು ಕ್ರಿ.ಶ. ಹನ್ನೆರಡನೆಯ ಶತಮಾನದ ಅಂತ್ಯದಲ್ಲಿದ್ದ ನಿಂಬಾರ್ಕನೆಂಬ ವೈಷ್ಣ ವಾಚಾರ್ಯನು ರಾಧೆ ಕೃಷ್ಣನ ಪರಮ ಪ್ರೇಯಸಿಯೆಂದು ಹೇಳಿರುವುದ ರಿಂದಲೂ ಈ ರಾಧಾ-ಮಾಧವ ಕಥೆಯು ಹನ್ನೆರಡನೆಯ ಶತಮಾನ ದಿಂದೀಚೆಗೆ ಗ್ರಂಥಸ್ಥವಾಗಿರಬೇಕು. ಈ ಕಥೆಯನ್ನೊಳಗೊಂಡಿರುವ ಬ್ರಹ್ಮ ವೈವರ್ತವೂ ಆಧುನಿಕ ಗ್ರಂಥವೇ ಇರಬಹುದು.

# ಭಾಗವತದ ಶ್ರೀಕೃಷ್ಣ

## " ಅವತಾರಪುರುಷ "

ಹಿಂದೆ ಭೂಲೋಕದಲ್ಲಿ ಅನೇಕ ರಾಕ್ಷಸರೂ ದುಷ್ಟ ಕ್ಷತ್ರಿಯರೂ ಹೆಚ್ಚಿಕೊಂಡು ಸಾಧುಸಜ್ಜನರಿಗೆ ಉಪಟಳ ಹೆಚ್ಚಾಯಿತು. ಆಗ ದೇವತೆಗಳು ಬ್ರಹ್ಮನನ್ನು ಮುಂದಿಟ್ಟುಕೊಂಡು ಮಹಾವಿಷ್ಣುವಿನಲ್ಲಿಗೆ ಹೋಗಿ ಮೊರೆಯಿಟ್ಟುಕೊಂಡರು. ಭೂದೇವಿ ಪ್ರಾರ್ಥಿಸಿದಳು. ಇವರೆಲ್ಲರಿಗೂ ಅಭಯಪ್ರದಾನಮಾಡಿ ಶ್ರೀಮನ್ಮಹಾವಿಷ್ಣುವು ಭೂಭಾರವನ್ನು ಕಳೆಯುವುದಕ್ಕಾಗಿ ಮಧುರೆಯಲ್ಲಿ ವಸುದೇವ ದೇವಕಿಯರ ಮಗನಾಗಿ ಅವತಾರವೆತ್ತಿದನು. ತಾಯಹೊಟ್ಟೆಯಿಂದ ಜನಿಸಿಬಂದಾಗ ಶಂಖಚಕ್ರಗದಾಪಾಣಿಯಾದ ಚತುರ್ಭುಜ ಮೂರ್ತಿಯಾಗಿದ್ದ ಶ್ರೀಕೃಷ್ಣನಿಗೆ ದೇವಕೀ ವಸುದೇವರು ಭಕ್ತಿಯಿಂದ ಪ್ರಣಾಮಗಳನ್ನು ಸಲ್ಲಿಸಿ ತಮ್ಮ ದುಃಖಗಳನ್ನು ಹೇಳಿಕೊಂಡರು. ಆಗ ಅವರು ಮಾಡಬೇಕಾದ ಕೆಲಸಗಳನ್ನೆಲ್ಲ 'ನೇಮಿಸಿ' ಯಾದ ಮೇಲೆ ಶ್ರೀಕೃಷ್ಣನು "ನರಶಿಶುತನವನಾಂತನು."

ಶಿಶು ಕೃಷ್ಣನ ಅಪ್ಪಣೆಯಂತೆ ವಸುದೇವನು ಮಧುರೆಯಿಂದ ಹೊರಟು ಆ ಶಿಶುವನ್ನು ನಂದಾಲಯದಲ್ಲಿರಿಸಿ ಯಶೋದಾದೇವಿಯು ಅಂದೇ ಪ್ರಸವಿಸಿದ್ದ ಹೆಣ್ಣು ಮಗುವನ್ನು ತೆಗೆದುಕೊಂಡು ಬಂದು ದೇವಕಿಯ ಬಳಿ ಇರಿಸಿದನು. "ಉರುವದೈವವನುರದಲಾಂತಿ" ದ್ದುದರಿಂದ ವಸುದೇವನಿಗೆ ಸೆರೆಮನೆಯಿಂದ ಬಿಡುಗಡೆ ದೊರೆಯಿತು, ದಾರಿ ಸುಲಭವಾಯಿತು, ಭೋರ್ಗರೆದು ಹರಿಯುತ್ತಿದ್ದ ಯಮುನಾನದಿ ಸುಲಭವಾಗಿ ದಾರಿಬಿಟ್ಟಿತು. ಹಿಂತಿರುಗಿದ ಮೇಲೆ ಸೆರೆಮನೆ, ಕಾಲಸಂಕಲೆ, ಎಲ್ಲ ಯಥಾಪ್ರಕಾರವಾದುವು!

ದೇವಕಿ ಹೆತ್ತಳೆಂಬ ವಾರ್ತೆ ಕೇಳುತ್ತಲೂ ಕಂಸನು ಬಂದು ಹೆಣ್ಣು

ಮಗುವೆಂದು ತಂಗಿ ಎಷ್ಟು ಬೇಡಿಕೊಂಡರೂ ಕನಿಕರಿಸದೆ ಅದನ್ನು ಕಿತ್ತು ಕೊಂಡು ಹೋಗಿ ಕೊಲ್ಲಲು ಯತ್ನಿಸಿದನು. ಆದರೆ ಆ ಮಗುವು ಅವನ ಕೈಯಿಂದ ಹಾರಿಹೋಗಿ ಅಭ್ರಮಾರ್ಗದಲ್ಲಿ ನಿಂತು "ಎಲೆ ಪಾಪಿ! ನಿನ್ನಸುವ ಕಳೆವ ಕಾಲಾತ್ಮಕನು ಧರೆಯಲಿ ಬೆಳೆವುತೈದನೆ. ಬೇಗನೆ ನಿನ್ನೀತಲೆಯ ಮುಚ್ಚಿಯಿಸಿಕೋ" ಎಂದು ನುಡಿದು ಮಾಯವಾಯಿತು! ಕಂಸನು ಬೆರ ಗಾದನು. ಆ ಮಾಯಾವಿ ವಿಷ್ಣುವು ಕಡೆಗೂ ತನ್ನನ್ನು ವಂಚಿಸಿದನೆಂದು ರುಷ್ಟನಾಗಿ ಆ ರಾಕ್ಷಸನು ತನ್ನ ವೈರಿಯನ್ನು ಹುಡುಕಿ ಕೊಲ್ಲಲು ನಾನಾ ಪ್ರಯತ್ನಗಳನ್ನು ಮಾಡತೊಡಗಿದನು.

## ಗೋಪಾಲಕ

ಇತ್ತ ಶ್ರೀಕೃಷ್ಣನು ನಂದನ ಮನೆಯಲ್ಲಿ ಬಿದಿಗೆಯ ಚಂದ್ರನಂತೆ ಬೆಳೆಯುತ್ತಿದ್ದನು. ಅಖಿಳೇಶ್ವರನ ಸನ್ನಿಧಿಯ ದೆಸೆಯಿಂದ ಗೋಕುಲದಲ್ಲಿ ಅಂದು ಮೊದಲು ಉತ್ಸವ ಪರಂಪರೆಯೇ ನಡೆಯಿತು. ಗೋಪಗೋಪಿ ಯರು ಸುಮನೋಹರ ಸುಂದರ ಶಿಶುಸಂದರ್ಶನದಿಂದ ಹರ್ಷಪರವಶ ರಾದರು. ಜನ ಮುದ್ದು ಕೂಸಾದ ಶ್ರೀಕೃಷ್ಣನು ದಿನದಿನಕ್ಕೆ ಪ್ರವೃದ್ಧಮಾನ ನಾಗಿ ನಂದ ಯಶೋದೆಯರ ಕಣ್ಣಿಗೆ ಹಬ್ಬವನ್ನು ಮಾಡಿದನು. ಹೀಗಿರಲು ಕಂಸನಿಂದ ಪ್ರೇರಿತರಾದ ರಕ್ಕಸರನೇಕರು ಒಬ್ಬೊಬ್ಬರಾಗಿ ಬರತೊಡಗಿದರು. ನಂದನು ಒಂದು ದಿನ ಮಧುರಾ ನಗರಕ್ಕೆ ಹೋಗಿದ್ದಾಗ, ಮನೆಯಲ್ಲಿ ಯಾರೂ ಇಲ್ಲದ ಸಮಯವನ್ನು ಸಾಧಿಸಿ ಪೂತನಿಯೆಂಬ ಘೋರ ರಾಕ್ಷಸಿಯು ಬಂದು ಶಿಶು ಕೃಷ್ಣನನ್ನು ಕೊಲ್ಲಬಗೆದಳು. ಆದರೆ ಕೃಷ್ಣನು ಅವಳ ಸ್ತನ್ಯ ಪಾನಮಾಡುವ ನೆವದಲ್ಲಿ ಅವಳ ಪ್ರಾಣವನ್ನೇ ಹೀರಿದನು. ನಂದನು ಮನೆಗೆ ಹಿಂದಿರುಗಿಬರುವವೇಳೆಗೆ ಮನೆಯಲ್ಲಿ ಬಿದ್ದಿದ್ದ ರಕ್ಕಸಿಯ ಶವವನ್ನೂ ಅವಳ ಮೇಲೆ ಆಡಿಕೊಳ್ಳುತ್ತಿದ್ದ ಶಿಶುಕೃಷ್ಣನನ್ನು ಕಂಡು ಗಾಬರಿಗೊಂಡನು. ಯಶೋದೆ ಮಗುವನ್ನೆತ್ತಿಕೊಂಡು ಸಂತೈಸಿದಳು! ಗೋಪಿಕಾಸ್ತ್ರೀಯರು ಕೃಷ್ಣನಿಗೆ ದೃಷ್ಟಿ ತೆಗೆದರು; 'ರಕ್ಷೆ' ಮಾಡಿದರು. ಆ ಶಾಂತ ವಿಗ್ರಹನಿಗೆ

'ಗ್ರಹಶಾಂತಿ' ಮಾಡಿದರಂತೆ! ಈ ಪವಾಡವನ್ನು ಕಂಡು ಶಿಶು ಕೃಷ್ಣನ ಮಹಿಮಾತಿಶಯಕ್ಕೆ ಬೆರಗಾಗಿದ್ದ ಗೋಕುಲ ನಿವಾಸಿಗಳಿಗೆ ಒಂದಾದ ಮೇಲೊಂದು ಅನೇಕ ಉತ್ಪಾತಗಳು ಕಾಣತೊಡಗಿದುವು.

ತೃಣಾವರ್ತನೆಂಬ ಕಂಸದೂತನೊಬ್ಬನು ಬಿರುಗಾಳಿಯಾಗಿ ಬಂದು ಗೋಕುಲದಲ್ಲೆಲ್ಲ ಕೆಂದೂಳನ್ನು ಬೀರಿ ಗಿಡಮರ ಬಳ್ಳಿಗಳನ್ನು ಮುರಿದು ಕೃಷ್ಣನನ್ನು ಎತ್ತಿಕೊಂಡು ಅಂಬರಕ್ಕೆ ಹಾರಿಹೋದನು. ಮಗುವನ್ನು ಕಾಣದೆ ಯಶೋದೆ ತಲ್ಲಣಿಸಿದಳು. ಗೋಪಿಯರು ಗೋಳಿಟ್ಟರು. ನಂದಾದಿ ಗೋಪರು ಕಂಗೆಟ್ಟು ದಿಕ್ಕುದಿಕ್ಕುಗಳಲ್ಲಿಯೂ ಕೃಷ್ಣನನ್ನು ಹುಡುಕತೊಡಗಿದರು. ಅತ್ತ ಕೃಷ್ಣನು ಆಕಾಶದಲ್ಲಿ ತೃಣಾವರ್ತನ ಕೊರಳನ್ನು ಎರಡು ಕೈಗಳಿಂದಲೂ ಹಿಡಿದು ಅವುಕಿ ಕೊಂದನು. ಆಗ ಆ ರಕ್ಕಸನ ಶವ ಗೋಕುಲದ ಬಳಿ ಬಿದ್ದಿತು. ಆ ಶವದ ಮೇಲೆ ಶಮ್ಮ ಕೃಷ್ಣನು ಆಡುತ್ತಿದ್ದುದನ್ನು ಕಂಡು ಗೋಕುಲ ಜನಕ್ಕೆ ಹೋದ ಜೀವ ಮರಳಿಬಂದಿತು. ಆದರೆ ಈ ಚಿಕ್ಕ ಮಗು ಬೃಹದಾಕಾರದ ರಕ್ಕಸನನ್ನು ಕೊಂದ ಬಗೆಯನ್ನು ತರ್ಕಿಸಲಾರದೆ ಆ ಸರಳ ಮನಸ್ಸಿನ ಗೋಪರು ಕಂಗಾಲಾದರು.

ಇನ್ನೊಂದು ದಿನ ಯಶೋದೆಗೆ ಕೃಷ್ಣನ ಬಾಯಲ್ಲಿ ಬ್ರಹ್ಮಾಂಡವೇ ಕಾಣಿಸಿತು! ಆಕೆ ಇದೇನೋ ಅನರ್ಥವೆಂದು ಅಂಜಿ "ಹರಿ, ಶರಣು" ಎನ್ನುತ್ತ ಧ್ಯಾನ ಮಗ್ನಳಾಗಿ ಕುಳ್ಳಿರಲು ಕರುಣದಿಂದ ಕೃಷ್ಣನು ಮತ್ತೆ ಆ ವಿಶ್ವರೂಪವನ್ನು ಉಪಸಂಹರಿಸಿ ನರಶಿಶುವಾದನು! ಹೀಗೆ ಕೃಷ್ಣನು ತಂದೆ ತಾಯಿಗಳಿಗೂ ತನ್ನ ಸುತ್ತುಮುತ್ತಿನವರಿಗೂ ತನ್ನ ದೈವೀಸ್ವರೂಪವನ್ನು ಹಲವು ಬಾರಿ ತೋರಿಸಿದನು. ಆದರೆ ಮಾಯಾಪರವಶರಾದ ಜನ ಎಷ್ಟು ನಿದರ್ಶನಗಳನ್ನು ಕಂಡರೂ ಮತ್ತೆ ಮತ್ತೆ ಕೃಷ್ಣನನ್ನು ನರಶಿಶುವೆಂದೇ ಭ್ರಮಿಸುತ್ತಿದ್ದರು. ಕೃಷ್ಣಬಲರಾಮರು ಶ್ವೇತ ನೀಲ ಪರ್ವತಗಳಂತೆ ಮೆರೆಯುತ್ತ ಗೋಪಾಲಕರ ಪ್ರೇಮಾದರಗಳಿಗೆ ಪಾತ್ರರಾಗಿ ಪ್ರಕೃತಿಯ ಮಡಿಲಲ್ಲಿ ಬೆಳೆದರು.

ಸ್ವಲ್ಪ ವಯಸ್ಸಾಗುತ್ತಲೂ ರಾಮಕೃಷ್ಣರು ಎಲ್ಲ ಗೋಪಬಾಲಕರಂತೆ

ಕರುಗಳನ್ನು ಹೊಡೆದುಕೊಂಡು ಹೋಗಿ ಮೇಯಿಸಿಕೊಂಡು ಬರತೊಡಗಿದರು; ಇತರ ಹುಡುಗರೊಡನೆ ಸೇರಿ ಬೇಕಾದಷ್ಟು ಚೆಲ್ಲಾಟವಾಡಿದರು. ನೆರೆ ಹೊರೆಯ ಮನೆಗಳಲ್ಲಿ ಹಾಲು ಮೊಸರುಗಳನ್ನು ಕದ್ದು ಕುಡಿದರು, ಗೋಪಿಯರನ್ನು ಪೀಡಿಸಿ, ನಲಿಸಿ, ನಗಿಸಿ ಬಾಲಲೀಲೆಗಳನ್ನು ಮೆರೆದರು. ಯಶೋದೆ ಒಂದು ದಿನ ಕೃಷ್ಣನ ತುಂಟತನಕ್ಕೆ ರೋಸಿಹೋಗಿ ಅವನನ್ನು ಒಂದು ಒರಳಿಗೆ ಕಟ್ಟಿಹಾಕಿ ಹೊಲದ ಕೆಲಸಕ್ಕೆ ಹೋದಳು. ಆಗ ಬಾಲಕೃಷ್ಣನು ಆ ಒರಳನ್ನೂ ಎಳೆದುಕೊಂಡು ಬಂದು ಮನೆಯ ಮುಂದಿದ್ದ ಅವಳಿ ಮತ್ತಿ ಗಿಡಗಳ ಮಧ್ಯೆ ಅದನ್ನು ನೆಕ್ಕಿಸಿ ಎಳೆಯಲು ಆ ಮರಗಳು ಬಿದ್ದು ಹೋದುವು. ಆ ಮರಗಳಿಂದ ಇಬ್ಬರು ಗಂಧರ್ವರು ಹೊರಟುಬಂದು ಕೃಷ್ಣನಿಗೆ ನಮಿಸಿ ಅವನ ಆಶೀರ್ವಾದವನ್ನು ಪಡೆದು ಶಾಪವಿಮುಕ್ತರಾಗಿ ಅಳಕಾಪುರಕ್ಕೆ ಹಿಂತಿರುಗಿದರು. ಇತ್ತ ಆ ಮರಗಳು ಬಿದ್ದ ಸದ್ದನ್ನು ಕೇಳಿ ಭೀತಚಿತ್ತನಾದ ನಂದನು ಓಡಿಬಂದು ನೋಡಿ "ಈ ಹೆಮ್ಮರಗಳನ್ನು ಶಿಶು ಕೀಳಲಬಲ್ಲವನೆ?" ಎಂದು ಸಂದೇಹಿಸಿದನು. ಆದರೆ ಅಲ್ಲಿದ್ದ ಗೋಪರೆಲ್ಲರೂ "ಎಲ್ಲಾ ಬಾಲಕರ ಪರಿಯಲ್ಲ ಕೃಷ್ಣನ ಲೀಲೆ ಕೌತುಕವು" ಎಂದರು. ಆದರೆ ಅದರಿಂದ ನಂದನಿಗೆ ಸಮಾಧಾನವಾಗಲಿಲ್ಲ. ಇದೇಕೋ ಉತ್ಪಾತಗಳೇ ನಡೆಯುತ್ತಿರುವುವೆಂದು ಹೆದರಿ ಅವನು ಆ ಕ್ಷೇತ್ರವನ್ನುಬಿಟ್ಟು ಬೃಂದಾವನವೆಂಬ ಬೇರೊಂದು ವನ ಪ್ರದೇಶಕ್ಕೆ ಹೊರಟನು. ಸಮಸ್ತಗೋಪಾಲಕರೂ ತಮ್ಮ ತಮ್ಮ ಸ್ತ್ರೀಪುತ್ರರನ್ನು ಕರೆದುಕೊಂಡು ಕರುತುರುಗಳನ್ನೂ ಅಟ್ಟಿಕೊಂಡು ನಂದನೊಡನೆ ಪ್ರಯಾಣಮಾಡಿದರು. ಗೋವರ್ಧನಗಿರಿಯ ಪ್ರಾಂತದಲ್ಲಿನ ಆ ವನದ ತೃಣಜಲಸಮೃದ್ಧಿಯು ನಂದಾದಿಗೋಪರನ್ನು ಸಂತುಷ್ಟಿಗೊಳಿಸಿತು. ಕೃಷ್ಣಬಲರಾಮರು ಅಲ್ಲಿನ ಪ್ರಕೃತಿ ಸೌಂದರ್ಯವನ್ನು ಕಂಡು ಹರ್ಷಿತರಾದರು. ಯಮುನಾ ಪುಳಿನ ಲಕ್ಷ್ಮಿ ಅವರ ಮನಸ್ಸಿನಲ್ಲಿ ಹರ್ಷವುಕ್ಕಿಸಿತು.

## ಕ್ರಾಂತಿಪುರುಷ

ಬೃಂದಾವನದಲ್ಲಿ ಕೆಲವುಕಾಲ ಕಳೆದಮೇಲೆ ಒಂದು ದಿನ ನಂದಾದಿ

ಗಳು ವಾಡಿಕೆಯಂತೆ ಇಂದ್ರಯಜ್ಞಕ್ಕೆ ಪ್ರಯತ್ನ ನಡೆಸಿದರು. ಮಳೆಗರೆದು ತೃಣಜಲಸಮೃದ್ಧಿಯನ್ನುಂಟುಮಾಡುವ ಇಂದ್ರನನ್ನು ಪೂಜಿಸುವುದು ಗೋಪಾಲಕವೃತ್ತಿಯವರ ಪದ್ಧತಿ. ಆದರೆ ಕೃಷ್ಣನು ಅಂದು ಏನೂ ಅರಿಯದವನಂತೆ "ನಿಮಗೆ ಇಂದು ಏನು ಸಂಭ್ರಮ? ಈ ಯಜ್ಞಕ್ಕೆ ದೇವತೆಯಾರು? ಇದರಿಂದ ಫಲವೇನು? ಇದನ್ನು ನನಗೆ ತಿಳಿಯ ಹೇಳಬಾರದೆ?" ಎಂದು ನಂದನನ್ನು ಪ್ರಶ್ನೆಮಾಡಿದನು. ಆಗ ನಂದನು ಮಗನ ಸಂಶಯಪರಿಹಾರಮಾಡಹೊರಟು "ಮಗನೆ, ಈ ಯಜ್ಞಕ್ಕೆ ಇಂದ್ರನೇ ದೇವತೆ. ವೃಷ್ಟಿ ನಾವು ಬಯಸುವ ಫಲ. ವೃಷ್ಟಿಯಿಂದಲೇ ಸಚರಾಚರಜಗತ್ತಿಗೆ ಜೀವನ" ಎಂದನು. "ಹಾಗಾದರೆ ಈ ಯಜ್ಞ ಲೌಕಿಕವೊ ವೈದಿಕವೊ? ಈ ಇಂದ್ರಯಜ್ಞವು ಯಾರಿಗೆ ವಿಹಿತ? ವೃಥಾ ಏತಕ್ಕಾಗಿ ಧನಕ್ಷಯಮಾಡಿಕೊಳ್ಳುವಿರಿ? ನನ್ನ ಮಾತು ನಿಮಗೆ ಹಿತವಾಗುವುದಾದರೆ ಈ ಯಜ್ಞವನ್ನು ನೀವು ಮಾಡಬೇಡಿ. ಇದು ಉಚಿತವಲ್ಲ" ಎಂದು ಕೃಷ್ಣನು ನುಡಿದನು. ಮಗನ ಈ ಮಾತು ಕೇಳಿ ನಂದನಿಗೆ ಅಂಜಿಕೆಯಾಯಿತು. ಲೋಭದಿಂದ ಕುಲಾಗತಕ್ರಮವನ್ನು ಬಿಡಲು ಅವನಿಗೆ ಧೈರ್ಯ ಸಾಲಲಿಲ್ಲ. ಇಂದ್ರಯಾಗವನ್ನು ಮಾಡದಿದ್ದರೆ ದೈವ ವಿರೋಧವುಂಟಾಗುವುದೆಂದೂ ಅದರಿಂದ ಏನು ಕಷ್ಟಒಂದರೂ ಬರಬಹುದೆಂದೂ, ಆದಕಾರಣ ಅಂಥಾ ಯೋಚನೆ ಸಲ್ಲದೆಂದೂ ಅವನು ಮಗನಿಗೆ ಬುದ್ಧಿ ಹೇಳಿದನು. ಆದರೆ ಕೃಷ್ಣನು ಅಲ್ಲಿಗೆ ಬಿಡಲಿಲ್ಲ. ಅವನು "ನಾವು ನಿಜವಾಗಿ ಪೂಜೆ ಮಾಡಬೇಕಾದರೆ ಈ ಗೋವರ್ಧನಗಿರಿಗೆ ಮಾಡಬೇಕು. ನಮ್ಮ ಗೋವುಗಳಿಗೆ ತೃಣಸಮೃದ್ಧಿಯುಂಟಾಗಿರುವುದು ಇದರಿಂದಲೇ. ಈ ಬೆಟ್ಟವೇ ನಮಗೆ ವಿವಿಧ ಕಂದಫಲ ಪ್ರಸೂನಗಳನ್ನು ಕೊಡುವಂಥಾದ್ದು. ಆದ್ದರಿಂದ ಈ ಗೋವರ್ಧನಾದ್ರಿಗೇ ಪೂಜೆಯನ್ನು ಸಲ್ಲಿಸಬೇಕು. ಇಂದ್ರನಿಗೇಕೆ ಮಾಡಬೇಕು ಪೂಜೆ?" ಎಂದು ವಾದಿಸಿದನು. ಕೃಷ್ಣನ ಈ ಮಾತುಗಳು ಹಲವರಿಗೆ ಹಿತವೆನಿಸಿದುವು. ಹಲವರು ಗೋಪಾಲಕರು ಗೋವರ್ಧನಾದ್ರಿಯಿಂದ ತಮಗೆ ಉಪಕಾರವೆಂಬ ಮಾತನ್ನು ಬಹಳವಾಗಿ

ಮೆಚ್ಚಿಕೊಂಡರು. ಅವರೆಲ್ಲ ಕೃಷ್ಣನ ಅಭಿಪ್ರಾಯವನ್ನೇ ಸಮರ್ಥಿಸಿದರು. ನಂದನೂ ಕೃಷ್ಣನ ಮಹಿಮಾತಿಶಯವನ್ನು ಮನಗಂಡಿದ್ದನಾದ್ದರಿಂದ ಕಡೆಗೆ ಅವನ ಮಾತಿಗೆ ಸಮ್ಮತಿಸಿದನು. ಇಂದ್ರಯಜ್ಞಕ್ಕಾಗಿ ಕೂಡಿಸಿಟ್ಟದ್ದ ಸಾಮಗ್ರಿಗಳೆಲ್ಲ ಗಿರಿಯಜ್ಞಕ್ಕೆ ಒದಗಿದುವು.

ಗೋಪಗೋಪಿಯರೆಲ್ಲ ಸಡಗರದಿಂದ ಅಲಂಕರಿಸಿಕೊಂಡು ಗೋವರ್ಧನ ಗಿರಿಗೆ ಪ್ರದಕ್ಷಿಣೆ ಮಾಡಿದರು. ಕೃಷ್ಣಬಲರಾಮರೂ ಮಿಕ್ಕೆಲ್ಲರೊಡನೆ ಬಂದು ಅದ್ರಿಗೆ ನಮಸ್ಕರಿಸಿದರು. ಮಾಡಿದ ಅಡಿಗೆಯನ್ನೆಲ್ಲ ಗಾಡಿಗಳಲ್ಲಿ ತುಂಬಿಸಿತಂದು ಗೋವರ್ಧನಾದ್ರಿಗೆ ನಿವೇದನ ಮಾಡಿದರು. ಬೆಟ್ಟಕ್ಕೆ ಪೂಜೆ ಮಾಡಿ ಗೋಪರು ಕೊಂಬು ಕಹಳೆಗಳನ್ನೂದುತ್ತ, ಹರೆಗಳನ್ನು ಬಾರಿಸುತ್ತಾ ಬಲಿಹರಣವನ್ನು ಹಾಕಿ ಕೈ ಮುಗಿಯಲು ಅಸುರಾರಿ ಶ್ರೀಕೃಷ್ಣನೇ ಗಿರಿಯ ಮೇಲೆ ರೂಪಾಂತರದಲ್ಲಿದ್ದು ಊಟ ಮಾಡಿದನು. ಅದನ್ನು ಕಂಡ ಗೋಪಾಲಕರು ಶೈಲರಾಜನೇ ತಮ್ಮ ಭಕ್ತಿಗೆ ಮೆಚ್ಚಿ ಸಾಕಾರನಾಗಿ ಬಂದು ತಾವಿತ್ತ ಬಲಿಯನ್ನುಂಡನೆಂದೇ ಭಾವಿಸಿ ಹರ್ಷೋದ್ಗಾರ ಮಾಡಿದರು. "ಶಿಶುಪಶುವೃದ್ಧವನಿತಾಕ್ಷೇಮವನು ನಮಗೆ, ತಂದೆ, ಕರುಣಿಸು" ಎನ್ನುತ್ತಾ ಗೋವಿಂದನು ಅಂದು ತನಗೆ ತಾನೇ ವಂದಿಸುತ್ತ ಗಿರಿರಾಜನ ಇದಿರಿನಲ್ಲಿ ದಂಡಪ್ರಣಾಮ ಮಾಡಿದನು !

ನಂದಾದಿಗೋಪರು ಸಂತೋಷಮಗ್ನರಾಗಿರುವಾಗ ಅತ್ತ ಇಂದ್ರನು ಬಹಳ ಆಗ್ರಹಗೊಂಡನು. ಅವನ ಸಾವಿರ ಕಣ್ಣುಗಳು ಕಿಡಿಗೆದರಿದುವು! ಅವನು ಸಿಟ್ಟಿನಿಂದ ಹಲ್ಲು ಕಡಿಯುತ್ತಾ ಗೋಪಾಲಕರ ಸೊಕ್ಕುಮುರಿಯಲು ಬಗೆದು ಪ್ರಳಯ ಮೇಘಗಳನ್ನೇ ಕಳುಹಿಸಿ ರೌದ್ರವಾದ ಮಳೆ ಸುರಿಸಿದನು. ಗೋಕುಲವು "ನೀರೊಳಗಿಟ್ಟ ಮೃತ್ತಿಕೆಯಂತೆ" ಆಯಿತು. ಸಿಡಿಲು ಮಳೆಗಾಳಿಗಳ ಬಾಧೆಗೆ ಗೋಪಗೋಪಿಯರು ಹೆದರಿ ಕಂಗೆಟ್ಟರು. ಅನೇಕರು "ಕೃಷ್ಣನೆ ಕೆಡಿಸಿದನು ಕೈಗಾಯ ಹೇಳು" ಎಂದು ಮೊರೆಯಿಟ್ಟರು. ಕೃಷ್ಣನ ನಾಯಕತ್ವದಲ್ಲಿ ಅಚಂಚಲ ಶ್ರದ್ಧೆಯಿದ್ದ ಅನೇಕ

ಗೋಪಾಲಕರು "ನಮಗೆ ಈ ಕೃಷ್ಣನಿರಲು ಎತ್ತಣದುವಿಪತ್ತು! ಉತ್ತಮನನು ಆಶ್ರಯಿಸಿ, ಬನ್ನಿ" ಎಂದು ಕೂಗಿ ಹೇಳುತ್ತ ನೀರನ್ನು ಈಸುತ್ತ ಗೋವಿಂದನಿದ್ದೆಡೆಗೆ ಬಂದು ಸೇರಿದರು. ಗೋವುಗಳು ಕರುಗಳನ್ನು ಮುಂದೆ ಬಿಟ್ಟುಕೊಂಡು ಅಚ್ಯುತನ ಅಂಘ್ರಿ ಕಮಲವನ್ನು ಹುಡುಕುತ್ತ ಬಂದುವು. ಆಗ ಶ್ರೀಕೃಷ್ಣನು ಗೋಪರಿಗೆ ಅಭಯ ನೀಡಿದನು. ಅವನು ತನ್ನ ಎಡಗೈಯನ್ನು ನೀಡಿ ಗೋವರ್ಧನಾದ್ರಿಯನ್ನು ಮೇಲಕ್ಕೆತ್ತಿ ಕೊಡೆಯ ಹಾಗೆ ಹಿಡಿದುಕೊಂಡನು. "ಈ ಗಿರಿ ನನ್ನ ಕೈಯಿಂದ ಬೀಳದು. ಅಂಜದೆ ಎಲ್ಲರೂ ಈ ಬೆಟ್ಟದ ಕೆಳಗೆ ಬಂದು ವಾಸಮಾಡಿ" ಎಂದು ಕೃಷ್ಣನು ಘೋಷಿಸಲು ಗೋವಳರು ತಮ್ಮ ಗೋವುಗಳೊಡನೆ ಪ್ರವೇಶಿಸಿ ಇಂದ್ರನ ಹೆದರಿಕೆಯೇ ಇಲ್ಲದೆ ತಮ್ಮ ಮನೆಗಳಲ್ಲಿರುವಂತೆ ಇದ್ದುಬಿಟ್ಟರು. ಆ ಜನ ಕೃಷ್ಣನ ಸೌಂದರ್ಯ ಸುಧೆಯಿಂದ ಹಸಿವು ಬಾಯಾರಿಕೆಗಳನ್ನು ಮರೆತರು. ಶಶಿಮುಖಿಯರು ಅವನ ಚರಿತ್ರೆಯನ್ನು ಹಾಡತೊಡಗಿದರು. ಏಳು ದಿನ ಪರ್ಯಂತವೂ ಹೀಗೆಯೇ ಶ್ರೀಕೃಷ್ಣನು ಆ ಬೆಟ್ಟವನ್ನು ಹಿಡಿದೇ ಇದ್ದನು. ಇಂದ್ರನ ಗರ್ವ ಮುರಿಯಿತು. ಅವನು ನಾಚಿಕೊಂಡು ಮಿತಪರಿವಾರದೊಡನೆ ಬಂದು ಕೃಷ್ಣನಿಗೆ ನಮಿಸಿ ತನ್ನ ತಪ್ಪನ್ನೊಪ್ಪಿಕೊಂಡನು. ಆಗ ಕೃಷ್ಣನು ಇಂದ್ರನನ್ನು ಸಂತೈಸಿ "ಹೋಗು ಮಗನೆ ಮದಾಂಧತನಕೊಳಗಾಗದೆನ್ನಾಜ್ಞೆಯನು ಮಾಡುವನಾಗಿ ನಿನ್ನಧಿಕಾರದಲಿ ನೀನಿಹುದು ಗರ್ವಿಸದೆ" ಎಂದು ಅಪ್ಪಣೆಕೊಟ್ಟು ಕಳುಹಿದನು. ಹೀಗೆ ಕೃಷ್ಣನು ಜನನಾಯಕನಾದನು. ಅವನ ಮಾತಿನಲ್ಲಿ ಎಲ್ಲರಿಗೂ ಗೌರವ ಭಕ್ತಿಗಳುಂಟಾಗುವಂತೆ ಕಾರ್ಯ ಸಾಧನೆ ಮಾಡಿ ಜನರಿಗೆ ಕೇಡು ಬಗೆದವನನ್ನು ನಿಗ್ರಹಿಸಿದನು. ಅಹಂಕಾರದಿಂದ ಮೆರೆದ ಶತ್ರುವು ವಿಗತಾಹಂಕಾರನಾಗಿ ಬಂದು ಶರಣಾಗತನಾದಾಗ ಕೃಪೆದೋರಿ ದಯಾಮಯನೆನಿಸಿದನು. ಗೋಪಾಲಕರ ಜೀವನ ವಿಧಾನದಲ್ಲಿಯೇ ಇದರಿಂದ ಕ್ರಾಂತಿಯುಂಟಾಯಿತೆಂದು ಹೇಳಬಹುದು. ಅರ್ಥವಿಲ್ಲದ ಸಂಪ್ರದಾಯವನ್ನು ಮುರಿದು ಹೊಸ ತತ್ವವನ್ನು ಸ್ಥಾಪನೆ ಮಾಡಿ ಶ್ರೀಕೃಷ್ಣನು ಕ್ರಾಂತಿಪುರುಷನಾದನು.

## ಭೂಪಾಲಕ

ಬೃಂದಾವನದಲ್ಲಿ ಕೃಷ್ಣನು ಗೋಪಾಲಕನಾಗಿದ್ದವನು ಜನನಾಯಕನೆನಿಸುವವೇಳೆಗೆ ಮಧುರೆಯಲ್ಲಿ ಕಂಸನ ದುರಾಡಳಿತ ಮೇರೆ ಮೀರಿತ್ತು. ಅವನು ತನ್ನ ತಂದೆಯನ್ನೇ ಸೆರೆಯಲ್ಲಿಟ್ಟು ರಾಜ್ಯವನ್ನು ಆಕ್ರಮಿಸಿದವನು. ತನ್ನ ತಂಗಿ ಮತ್ತು ತಂಗಿಯ ಗಂಡನನ್ನು ಸೆರೆಯಲ್ಲಿಡಿಸಿದ್ದಲ್ಲದೆ ಅವರ ಮಕ್ಕಳನ್ನೆಲ್ಲ ಕರುಣೆಯಿಲ್ಲದೆ ಕೊಂದನು. ಅವನ ಅನುಚರರು ವಿಷ್ಣುವನ್ನು ಹುಡುಕಿ ಹಿಡಿಯುವ ಭರದಲ್ಲಿ ಅನೇಕಾನೇಕ ಸಾಧುಸಜ್ಜನರನ್ನು ನಾನಾ ವಿಧಗಳಲ್ಲಿ ಪೀಡಿಸುತ್ತಿದ್ದರು. ಯಾದವರನೇಕರು ಮಧುರೆಯನ್ನೇ ತ್ಯಜಿಸಿ ಓಡಿಹೋದರು. ಇಷ್ಟು ಸಾಲದೆ ಕಂಸನು ನಂದಗೋಕುಲದ ವೃತ್ತಾಂತವನ್ನು ಕೇಳಿ ಕೃಷ್ಣನೇ ಆ ಮಾಯಾವಿಯಾದ ವಿಷ್ಣುವೆಂದು ತಿಳಿದು ಸರ್ವ ಪ್ರಯತ್ನಗಳಿಂದಲೂ ಅವನನ್ನು ಕೊಲ್ಲಬೇಕೆಂದು ಸಂಕಲ್ಪಿಸಿ ಕೇಶಿಯೆಂಬ ರಕ್ಕಸನನ್ನು ಬೃಂದಾವನಕ್ಕೆ ಅಟ್ಟಿದನು. ಹಿಂದೆ ಕಳುಹಿಸಿದ ಅನೇಕ ದಾನವರನ್ನು ಕೊಂದಂತೆ ಕೃಷ್ಣನು ಅವನನ್ನೂ ಕೊಂದಾನೆಂದು ಹೆದರಿ ಅವನನ್ನು ಮಧುರೆಗೆ ಕರೆತರಿಸಿ ಜಟ್ಟಿಗಳಿಂದ ಕೊಲ್ಲಿಸಬೇಕೆಂದು ಯೋಚಿಸಿ ಚಾಣೂರ ಮುಷ್ಟಿಕರೆಂಬ ಪ್ರಸಿದ್ಧ ಮಲ್ಲ ಶ್ರೇಷ್ಠರನ್ನು ಕರೆಯಿಸಿ ಕೃಷ್ಣವಧೆಗೆ ನಿಯಮಿಸಿದನು. ಆಮೇಲೆ ಕಂಸನು ಅಕ್ರೂರನೆಂಬ ಯಾದವ ಶ್ರೇಷ್ಠನನ್ನು ಬರಮಾಡಿಕೊಂಡು ಸತ್ಕರಿಸಿ ಕೃಷ್ಣನನ್ನು ಮಧುರೆಗೆ ಕರೆತರುವಂತೆ ಪ್ರಾರ್ಥಿಸಿದನು.

ಭಕ್ತಶಿರೋಮಣಿಯಾದ ಅಕ್ರೂರನು ಕಂಸನ ದುರಭಿಸಂಧಿಯನ್ನು ಕಂಡು ದುಃಖಿಸಿದನು. ಇಂಥಾ ರಾಜನ ಸೇವೆ ಸಿಕ್ಕಿದುದಕ್ಕೆ ವ್ಯಸನ ಪಟ್ಟನಾದರೂ ಕೃಷ್ಣದರ್ಶನದ ಸಂಭ್ರಮದಲ್ಲಿ ರಥಾರೂಢನಾಗಿ ಹೊರಟು ಆತುರದಿಂದ ಪ್ರಯಾಣ ಮಾಡಿ ಬೃಂದಾವನವನ್ನು ಸೇರಿ ಬಲಕೃಷ್ಣರನ್ನು ಕಂಡು ದಂಡಪ್ರಣಾಮ ಮಾಡಿದನು. ಅವನನ್ನು ಸಂತೈಸಿ ಅರಮನೆಗೆ ಕರೆದೊಯ್ದು ಅತಿಥಿ ಸತ್ಕಾರ ಮಾಡಿ ಕೃಷ್ಣನು ಅವನನ್ನು ಬಹಳವಾಗಿ ಉಪಚರಿಸಿದನು. ಅಕ್ರೂರನ ಆಗಮನದ ಉದ್ದೇಶವನ್ನೆಲ್ಲ ಕೇಳಿ

ತಿಳಿದುಕೊಂಡು ಗಹಗಹಿಸಿ ನಕ್ಕನಂತೆ! ಆ ನಗುವಿನಿಂದ ಅಕ್ರೂರನ ಹೃತ್ತಾಪವೆಲ್ಲ ಹಾರಿಹೋಯಿತು. ಮಾರನೆಯ ದಿನವೇ ಕೃಷ್ಣಬಲರಾಮರು ಅಕ್ರೂರನೊಡನೆ ಮಧುರೆಗೆ ಹೊರಡುವುದೆಂದು ನಿರ್ಣಯವಾಯಿತು. ನಂದನ ಅಪ್ಪಣೆಯಂತೆ ಸಮಸ್ತ ಗೋಪಾಲಕರೂ ಪ್ರಯಾಣ ಹೊರಟು ನಿಂತರು.

ಗೋಪಿಕಾಸ್ತ್ರೀಯರಿಗೆ ಈ ವೃತ್ತಾಂತ ತಿಳಿಯುತ್ತಲೂ ಅವರಿಗೆ ಅಮಿತವಾದ ಪರಿತಾಪವುಂಟಾಯಿತು. ಕೃಪಾವಾರಿಧಿಯಾದ ಕೃಷ್ಣನು ಹೊರಟು ಹೋದ ಮೇಲೆ ಬೃಂದಾವನದ ಜೀವನವೇ ಹೋದಂತಾಗುವು ದೆಂದು ಮೊರೆಯಿಟ್ಟರು. ರಥಾರೂಢನಾದ ಕೃಷ್ಣನನ್ನೇ ನೋಡುತ್ತ ನಿಂತಿದ್ದ ಗೋಪಿಯರು ಹರಿರಥ ಕಣ್ಮರೆ ಯಾಗುವತನಕ, ರಥದ ಧ್ವಜ ಮರೆಯಾಗುವವರೆಗೆ, ಆ ರಥದ ದೂಳು ಅಡಗುವತನಕ ಆ ದಿಕ್ಕನ್ನೇ ನಿಟ್ಟಿಸುತ್ತ ಚಿತ್ರಪ್ರತಿಮೆಗಳಂತೆ ನಿಂತಿದ್ದು ಕೃಷ್ಣನ ದರ್ಶನ ತಮಗಿನ್ನು ದುರ್ಲಭವೆಂದು ನಿರಾಶೆಯಿಂದ ಹಿಂತಿರುಗಿದರು.

ಶ್ರೀಕೃಷ್ಣ ಬಲರಾಮರು ರಥಾರೂಢರಾಗಿ ಅಕ್ರೂರನೊಡನೆ ಮಧುರೆಗೆ ಪ್ರಯಾಣ ಮಾಡುತ್ತಿರಲು ದಾರಿಯಲ್ಲಿ ಅನೇಕ ಕಡೆ ಜನ ಸಂಭ್ರಮದಿಂದ ಕಾದಿದ್ದು, ದರ್ಶನಮಾಡಿ, ಕಾಣಿಕೆ ಕೊಟ್ಟು ಕೃತಾರ್ಥರಾದರು. ಮಧುರೆ ಯನ್ನು ಸೇರುತ್ತಲೇ ಅಕ್ರೂರನನ್ನು ಊರೊಳಕ್ಕೆ ಮೊದಲು ಕಳುಹಿಸಿ ಆ ರಾತ್ರಿ ಕೃಷ್ಣ ಬಲರಾಮರು ತಮ್ಮ ಗೆಳೆಯರೊಡನೆ ನಗರ ಪ್ರವೇಶ ಮಾಡಿದರು. ಕೃಷ್ಣನ ಮಹಿಮಾತಿಶಯವನ್ನು ಕರ್ಣಾಕರ್ಣಿಕೆಯಾಗಿ ತಿಳಿದಿದ್ದ ಮಧುರಾನಿವಾಸಿಗಳು ಅವರನ್ನು ಆದರದಿಂದ ಎದಿರುಗೊಂಡು ಅರ್ಘ್ಯಪಾದ್ಯಾದಿಗಳಿಂದ ಸತ್ಕರಿಸಿದರು. ಸುದಾಮನೆಂಬ ಒಬ್ಬ ಮಾಲೆ ಗಾರನು ಅವರನ್ನು ಆದರದಿಂದ ತನ್ನ ಮನೆಗೆ ಕರೆದೊಯ್ದು ಪ್ರೀತಿಯಿಂದ ಪೂಜಿಸಿದನು. ಕಂಸನ ಘಟ್ಟಿವಳ್ತಿಯಾದ ಕುಬ್ಜೆಯೆಂಬ ದಾಸಿಯು ರಾಜ ಯೋಗ್ಯವಾದ ಪರಿಮಳ ಗಂಧವನ್ನು ಕೃಷ್ಣನ ಪ್ರಾರ್ಥನೆಯಂತೆ "ಸತ್ಯ ಸಂಧನೆ ನೀನಿರಲು ಹಿಡಿ ಮತ್ತೆ ಯೋಗ್ಯರದಾರು?" ಎಂದು ಅವನಿಗೆ

ಸಮರ್ಪಿಸಿಬಿಟ್ಟಳು. ಅವಳ ಈ ಸೌಜನ್ಯಕ್ಕೆ ಮೆಚ್ಚಿದ ಶ್ರೀಕೃಷ್ಣಪರಮಾತ್ಮನ ಕರಸ್ಪರ್ಶನದಿಂದಲೇ ಆ ಕುಬ್ಜೆ ವಿಕಾರ ರೂಪು ಮಾಯವಾಗಿ ಕಿನ್ನರ ವಧುವಿನಂತೆ, ಇಂದ್ರನ ರಂಭೆಯಂತೆ, ರೂಪವತಿಯೆನಿಸಿದಳು! ಕೃಷ್ಣ ಕೈಂಕರ್ಯದ ಮಹಿಮೆ ಸಾಮಾನ್ಯವೇ? ಕೃಷ್ಣನು ದೀನೋದ್ಧಾರಕನು; ಪತಿತಪಾವನನು.

ಕಂಸನ ರಜಕನು ಕೃಷ್ಣನ ಹಿರಿಮೆಯನ್ನು ಗಮನಿಸದೆ ಅವನನ್ನು ತಿರಸ್ಕರಿಸಿ ಕೃಷ್ಣಬಲರಾಮರಿಂದ ಪೆಟ್ಟುತಿಂದು ಕೆಟ್ಟನು. ಅವನಲ್ಲಿದ್ದ ಉತ್ತಮ ವಸ್ತ್ರಗಳನ್ನು ತೆಗೆದುಟ್ಟುಕೊಂಡು ಈ ಕಂಸನ ಸೋದರಳಿಯಂದಿರು ಮಧುರೆಯನ್ನೆಲ್ಲ ಸುತ್ತಿ ರಾಯನ ಶಸ್ತ್ರಾಗಾರವನ್ನು ಹೊಕ್ಕು ಅಲ್ಲಿದ್ದ ದೊಡ್ಡ ಬಿಲ್ಲನ್ನು ಮುರಿದು ಕೋಲಾಹಲವನ್ನುಂಟುಮಾಡಿದರು. ಈ ಗದ್ದಲ ಕೇಳಿ ಕಂಸನು ಬೆದರಿದನು. ಕೃಷ್ಣನ ಸಾಹಸಕಾರ್ಯಗಳ ವೃತ್ತಾಂತ ಕೇಳಿ ಕಂಸಾಸುರನಿಗೆ ಆ ರಾತ್ರಿ ಜಾಗರಣೆಯಾಯಿತು. ಮಾರನೆಯ ದಿನ ರಂಗಸ್ಥಳದ ಸುತ್ತಲು ಪ್ರೇಕ್ಷಕರು ನೆರೆದಿರಲು ಕಂಸನು ಉಚಿತಾಸನದ ಮೇಲೆ ಮಂಡಿಸಿದನು. ಅವನ ಅಪ್ಪಣೆಯನ್ನು ಶಿರಸಾವಹಿಸಿ ಜಟ್ಟಿಗರು ಕಾದಿದ್ದರು. ಕೃಷ್ಣನ ಕೊಲೆಗೆಂದು ಕುವಲಯಾ ಪೀಡನೆಂಬ ಆನೆ ಸಿದ್ಧವಾಗಿತ್ತು. ಆಗ ಗೋಪಾಲಕರು ಉಪವನದಿಂದ ಮೆರೆವಣಿಗೆ ಹೊರಟು ಕೃಷ್ಣಬಲರಾಮರನ್ನು ಮುಂದಿಟ್ಟುಕೊಂಡು ಕಂಸನ ಅರಮನೆಯ ಕಡೆಗೆ ಬಂದರು.

ಕೃಷ್ಣನು ಬಂದುದನ್ನು ಕಂಡು ಮಾವುತನು ತಿವಿಯಲು ಕುವಲಯಾ ಪೀಡನು ವೇಗದಿಂದ ಮುಂದೆ ನುಗ್ಗಿ ಕೃಷ್ಣನನ್ನು ಸೊಂಡಿಲಲ್ಲಿ ಹಿಡಿದು ಕೊಂಡಿತು. ಆದರೆ ಕೃಷ್ಣನು ಅಂಜದೆ ಅದರ ಸೊಂಡಿಲನ್ನು ಹಿಡಿದು ಔಕಿ ಆನೆಯನ್ನು ಕೆಡವಿದನು. ಅದರ ದಂತಗಳಿಂದಲೇ ಮಾವುತನನ್ನು ಕೊಂದು ದುಷ್ಟ ಶಿಕ್ಷೆಯ ಕಾರ್ಯವನ್ನು ತೊಡಗಿದನು. ಸುರರು ಹೂ ಮಳೆಗರೆದರು. ತರುವಾಯ ಕೃಷ್ಣ ಬಲರಾಮರು ಕಂಸನ ಆಸ್ಥಾನವನ್ನು ಪ್ರವೇಶಿಸಿ ಚಾಣೂರ ಮುಷ್ಟಿಕರೊಡನೆ ಘನಘೋರವಾದ ಮಲ್ಲಕಾಳಗವನ್ನು

ಮಾಡಿ ಅವರನ್ನು ಕೊಂದು ತೀರಿಸಿದರು. ಉಳಿದವುಲ್ಲರು ಜೀವದಾಸೆ ಯಿಂದ ದಿಕ್ಕಾಪಾಲಾಗಿ ಓಡತೊಡಗಿದರು. ಕಂಸನು ಕಂಗೆಟ್ಟನು. "ನೂಕಿ ವರನೂರಿಂದ ಹೊಱಗೆ" ಎಂದು ಕೂಗಿ ಹೇಳುತ್ತ ಕಂಸನು ತನ್ನ ಸೈನ್ಯಕ್ಕೆ ಆಜ್ಞಾಪಿಸಿದನು. ಆದರೆ ಕೃಷ್ಣಬಲರಾಮರು ಕೊಂಚವೂ ತಡಮಾಡದೆ ಕಂಸನು ಕುಳಿತಿದ್ದ ರಾಜಮಂಚದ ಕಡೆಗೆ ನುಗ್ಗಿದರು. ಗರುಡನು ಹಾವನ್ನು ಹಿಡಿವಂತೆ ಕೃಷ್ಣನು ಕಂಸನನ್ನು ಹಿಡಿದು ಹೊಡೆದು ಅವನ ಕರುಳನ್ನೇ ಬಗಿದು ಕೊಂದನು. ಕಂಸನ ಬಳಗ ನೋಡುತ್ತಿದ್ದಂತೆ ಅವನ ಹೆಣವನ್ನು ಹಿಡಿದೆಳೆದಾಡಿ ಕೃಷ್ಣನು ತನ್ನ ಕೋಪಾಟೋಪವನ್ನು ಮೆರೆದನು. ಕಂಸನ ತಮ್ಮಂದಿರು ಇದನ್ನು ಸಹಿಸಲಾರದೆ ಮೇಲೆ ಬೀಳಲು ನೋದರರಿಬ್ಬರೂ ಅವರನ್ನು ಹೊಡೆಹೊಡೆದು ಕೊಂದು ರಕ್ತಪ್ರವಾಹವನ್ನೇ ಹರಿಸಿದರು. ಗೋಪಾಲಕನಾಗಿದ್ದ ಕೃಷ್ಣನು ಸಾಹಸದಿಂದ ದುಷ್ಟ ಕಂಸನನ್ನು ಕೊಂದು ಭೂಪಾಲಕನಾದನು. ಆದರೆ ಅವನು ರಾಜ್ಯವನ್ನು ಬಯಸಲಿಲ್ಲ, ಪಟ್ಟಕ್ಕೆ ಉಗ್ರಸೇನನೇ ಅಧಿಕಾರಿಯೆಂದು ಆತನನ್ನು ಸೆರೆಯಿಂದ ಬಿಡುಗಡೆ ಮಾಡಿ ಸಿಂಹಾಸನದ ಮೇಲೆ ಕೂಡಿಸಿ ರಾಜನಿರ್ಮಾಪಕನಾದನು! ತಾತನಿಗೆ ಮೊಮ್ಮಗ ರಾಜ್ಯಾಭಿಷೇಕ ಮಾಡಿಸಿದ ಆ ಸುಂದರ ಸನ್ನಿವೇಶವನ್ನು ಕಂಡ ವರು ಧನ್ಯರು. ಉಗ್ರಸೇನನೊಡನೆ ಅವನ ತಮ್ಮ ದೇವಕನಿಗೂ ಬಿಡುಗಡೆ ಯಾಯಿತು. ವಸುದೇವ ದೇವಕಿಯರೂ ಸೆರೆಯಿಂದ ಮುಕ್ತರಾಗಿ ಮಗನ ಧರ್ಮ ಸಂಸ್ಥಾಪನ ಕಾರ್ಯವನ್ನು ಕಂಡು ಹಿಗ್ಗಿದರು.

## ಉಪನಯನ–ವಿದ್ಯಾಭ್ಯಾಸ

ಇಷ್ಟೆಲ್ಲ ಸಾಹಸಕಾರ್ಯಗಳನ್ನು ಮಾಡಿ ಪ್ರಸಿದ್ಧರಾದ ಮೇಲೆ ಕೃಷ್ಣ ಬಲರಾಮರಿಗೆ ಉಪನಯನವಾಯಿತು. ಆಮೇಲೆ ಅವರು ಗುರುಕುಲ ವಾಸಮಾಡಿ ವಿದ್ಯೆ ಕಲಿಯಲು ಬಯಸಿ ಕಾಶೀ ನಗರದ ಸಾಂದೀಪಿನಿಯಲ್ಲಿಗೆ ಹೋಗಿ ಅವನ ಶಿಷ್ಯ ವೃತ್ತಿಯನ್ನು ಕೈಕೊಂಡರು. ತಾವು ರಾಜಪುತ್ರರೆಂಬ ಅಹಂಕಾರವಿಲ್ಲದೆ ಅವರು ತಮ್ಮ ನರನಾಟಕವನ್ನು ಮೆರೆದು ಗುರುಪಾದ

ಸೇವೆ ಮಾಡುತ್ತ ವಿದ್ಯೆಕಲಿತರು. ತಮಗೆ ಆತ್ಮ ವಿದ್ಯೆಯನ್ನುಪದೇಶಿಸಿದ ಆ ಮಹಾತ್ಮನಿಗೆ ಶ್ರೇಷ್ಠವಾದ ಗುರುದಕ್ಷಿಣೆ ಕೊಡಬಯಸಿ ಅವರ ಅಪೇಕ್ಷೆಯೇನೆಂದು ಕೇಳಲು ಸಾಂದೀಪಿನಿಗೆ ಏನೂ ತೋರದೆ ತನ್ನ ಹೆಂಡತಿಯ ಸಲಹೆ ಕೇಳಿದನು. ಆ ಪುಣ್ಯ ಶಾಲಿನಿಯು ಈ ಮಕ್ಕಳ ತೇಜಸ್ಸನ್ನು ಕಂಡು ಇವರು ದೇವಾಂಶಸಂಭೂತರೆಂದು ತಿಳಿದು ಪ್ರಭಾಸ ತೀರ್ಥದಲ್ಲಿ ಮುಳುಗಿ ಸತ್ತುಹೋದ ತನ್ನ ಮಗನನ್ನು ತಂದುಕೊಡುವಂತೆ ಕೇಳಿಕೊಂಡಳು. ಆಗ ಕೃಷ್ಣಬಲರಾಮರು ಸಾಗರ ರಾಜನನ್ನು ಕಂಡು ಗುರುಪುತ್ರನನ್ನು ತಂದುಕೊಡುವಂತೆ ಆಜ್ಞಾಪಿಸಿದರು. ಆತನು ತಾನು ಗುರುಪುತ್ರನನ್ನು ಕೊಲ್ಲಲಿಲ್ಲವೆಂದೂ ಶಂಬನೆಂಬ ಅಸುರನು ಆ ಕೆಲಸಮಾಡಿದನೆಂದೂ ವಿಜ್ಞಾಪಿಸಿದನು. ಕೂಡಲೇ ಕೃಷ್ಣನು ಆ ಅಸುರನನ್ನು ಹುಡುಕಿಕೊಂದು ಹೊಟ್ಟೆಸೀಳಿ ನೋಡಿದರೂ ಗುರುಪುತ್ರನು ಸಿಕ್ಕಲಿಲ್ಲ. ಆಗ ಅವನು ಯಮಾಲಯಕ್ಕೆ ಹೋಗಿ ಅವನನ್ನು ಕಂಡು ಗುರುಪುತ್ರನನ್ನು ತಂದುಕೊಡುವಂತೆ ಕೇಳಿದನು. ಆದರೆ ಯಮನು "ಪ್ರಾರಬ್ಧವಶದಿಂದ ಜೀವರು ನರಕವನ್ನು ಸೇರುವರು. ಅವರನ್ನು ಬಿಡುವ ಬಗೆಯಾವುದು?" ಎಂದು ಚರ್ಚೆಮಾಡಿದನು. ಕೃಷ್ಣನಿಗೆ ಈ ಮಾತು ಸಹಿಸಲಿಲ್ಲ. "ತರಹೇಳಿದರೆ ತಹುದು. ನಾನೊಲಿದಡಾಪ್ರಾರಬ್ಧವಿಲ್ಲ" ಎಂದು ಗರ್ಜಿಸಿದನು. ಆಗ ಗತ್ಯಂತರವಿಲ್ಲದೆ ಯಮನು ಗುರು ಪುತ್ರನನ್ನು ತಂದುಕೊಡಬೇಕಾಯಿತು. ಕೃಷ್ಣನು ಅವನನ್ನು ಕರೆತಂದು ಸಾಂದೀಪಿನಿಗೆ ಒಪ್ಪಿಸಿದಾಗ ಆ ತಂದೆ ತಾಯಿಗಳ ಹರ್ಷಾತಿಶಯವನ್ನು ಯಾರು ವರ್ಣಿಸಬಹುದು! ಸಾಂದೀಪಿನಿಯು ಆನಂದಬಾಷ್ಪಗಳನ್ನು ಸುರಿಸುತ್ತ ಕೃಷ್ಣಬಲರಾಮರನ್ನು ಬಿಗಿದಪ್ಪಿಕೊಂಡು "ಪೃಥ್ವೀಪಾಲರಾಗಿ ಪವಿತ್ರಕೀರ್ತಿಗಳಾಗಿ" ಎಂದು ಮನಃಪೂರ್ವಕವಾಗಿ ಹರಸಿದನು.

## ಪಲಾಯನ

ಗುರುಕುಲವಾಸದಿಂದ ಹೊರಟ ಬಲಕೃಷ್ಣರು ಮಧುರಾನಗರಕ್ಕೆ ಬಂದು ಧರ್ಮಪರಾಯಣರಾಗಿ ನಿಂತರು. ಆದರೆ ಅವರು ಬಹಳ ಕಾಲ

ನೆಮ್ಮದಿಯಿಂದ ಇರಲು ಸಾಧ್ಯವಾಗಲಿಲ್ಲ. ಕಂಸಾಸುರನ ಮಾವ, ಮಗಧ ರಾಜ್ಯದ ದೊರೆ, ಜರಾಸಂಧನು ಸೇಡು ತೀರಿಸಿಕೊಳ್ಳುವಸಲುವಾಗಿ ದಂಡೆತ್ತಿ ಬಂದು ಮಧುರೆಗೆ ಮುತ್ತಿಗೆ ಹಾಕಿದನು. ಆಗ ಕೃಷ್ಣಬಲರಾಮರು ಕವಚ ಧಾರಿಗಳಾಗಿ ಸೈನ್ಯಕ್ಕೆ ಮಾರ್ಗದರ್ಶನ ಮಾಡುತ್ತ ಕಾಳಗಕ್ಕೆ ನುಗ್ಗಿ ಪರಸೈನ್ಯ ಭೈರವರಾದರು. ಮಾಗಧನ ಸೈನ್ಯದಲ್ಲಿದ್ದ ಅನೇಕ ರಾಜರು ಇವರ ಉರುಬಿಗೆ ತಡೆಯಲಾರದೆ ಓಟಕಿತ್ತರು. ಆಗ ಜರಾಸಂಧನೇ ಸ್ವಯಂ ಬಲರಾಮನ ಮೇಲೆ ನುಗ್ಗಿ ಬಂದನು. ಆದರೆ ಬಲನನ್ನು ಗೆಲ್ಲಲು ಅವನಿಂದಾಗಲಿಲ್ಲ. ಬಲನು ತನ್ನ ಒನಕೆಯಿಂದ ಜರಾಸಂಧನ ತೇರನ್ನು ಪುಡಿಮಾಡಿದನು. ಜರಾಸಂಧ ನೆಲಕ್ಕೆ ಬಿದ್ದನು. ಅಲ್ಲಿಗೆ ಯುದ್ಧ ಮುಗಿಯಿತು. ಜರಾಸಂಧನು ನಾಚಿ ತನ್ನ ನಗರಕ್ಕೆ ಮರಳಿದನು. ಆದರೆ ಅವನ ದ್ವೇಷ ಕುಗ್ಗಲಿಲ್ಲ. ಅವನು ಮತ್ತೆಮತ್ತೆ ಸೈನ್ಯವನ್ನು ಶೇಖರಿಸಿಕೊಂಡು ಮಧುರೆಗೆ ಮುತ್ತಿಗೆ ಹಾಕುತ್ತಿದ್ದನು. ಬಾಣಾಸುರನ ಸಹಾಯವೂ ಅವನಿಗೆ ಒದಗಿದುದರಿಂದ ಈ ಕೆಲಸ ಸಾಧ್ಯವಾಯಿತು. ಹದಿನೇಳುಸಲ ಹೀಗೆ ಕೃಷ್ಣಬಲರಾಮರು ಯುದ್ಧಮಾಡಿ ಮಧುರೆಯನ್ನುಳಿಸಬೇಕಾಯಿತು.

ಹದಿನೆಂಟನೆಯ ಸಾರಿ ಜರಾಸಂಧನು ದಂಡೆತ್ತಿಬರಲು ಕೃಷ್ಣನು ಹಿರಿಯರೊಡನೆ ಮಂತ್ರಾಲೋಚನೆ ಮಾಡಿದನು. ವೃಥಾ ತನ್ನವರನ್ನು ಕಾಳಗಕ್ಕೊಡ್ಡಲು ತನಗೆ ಇಷ್ಟವಿಲ್ಲವೆಂದೂ ಆದ್ದರಿಂದ ತಾನು ಅಭೇದ್ಯವಾದ ಇನ್ನೊಂದು ದುರ್ಗವನ್ನು ಹುಡುಕಬೇಕೆಂದೂ ಹೇಳಿ ಮಧುರೆಯನ್ನು ಬಿಟ್ಟು ಓಡಿಹೋಗಿ ದ್ವಾರಕೆ ಎಂಬಲ್ಲಿ ಹೊಸಪಟ್ಟಣವನ್ನು ಕಟ್ಟಿಸಿದನು. ಯಾದವರೆಲ್ಲ ಅಲ್ಲಿಗೇ ಹೋಗಿ ಸೇರಿಕೊಂಡರು. "ನೋವೆನಾನೆನ್ನವರು ನೊಂದಡೆ, .... ಸೇವಕ ಜೀವಭರಣವಮಾಳ್ಪುದೇ ಕರ್ತವ್ಯವೆಮಗೆ" ಎಂದು ನುಡಿದು ಶ್ರೀಕೃಷ್ಣನು ತನ್ನ ಭಕ್ತವತ್ಸಲತೆಯನ್ನು ಮೆರೆದಿದ್ದಾನೆ. ಪ್ರಬಲ ಶತ್ರುವಿನೊಡನೆ ಹೋರಾಡಿ ಹಲವರನ್ನು ಕೊಲ್ಲಿಸುವುದಕ್ಕಿಂತ ಪಲಾಯನವಾದರೂ ಮಾಡಿ ನಂಬಿದವರನ್ನು ಸಲಹುವುದೇ ರಾಜನೀತಿ ಯೆಂಬುದನ್ನು ತನ್ನ ಆಚರಣೆಯಿಂದಲೇ ಉಪದೇಶಿಸಿದ್ದಾನೆ.

## ದಾನವಾಂತಕ

ಶ್ರೀಕೃಷ್ಣನ ಕೀರ್ತಿ ದೇಶವಿದೇಶಗಳಲ್ಲಿ ಹಬ್ಬಿತು. ಆತನ "ಶೀಲ ಗುಣ ಮಾಧುರ್ಯ ಶೌರ್ಯವಿಶಾಲರೂಪೌದಾರ್ಯ ಲಕ್ಷ್ಮ್ಯಯನತುಳ ಸಾಹಸ" ವನ್ನು ಗಾಯಕರು ಹಾಡಿದಣಿಯದಾದರು. ವಿದರ್ಭದೇಶದ ರಾಜಪುತ್ರಿ ರುಕ್ಮಿಣಿಯು ಕೃಷ್ಣನ ಕೀರ್ತಿಗೆ ಒಲಿದಳು; ಅವನನ್ನೇ ಮನಸಾ ವರಿಸಿದಳು. ಆದರೆ ಅವಳ ಅಣ್ಣ ರುಕ್ಮಿಯು ರುಕ್ಮಿಣಿಯನ್ನು ಚೇದಿದೇಶದ ರಾಜನಾದ ಶಿಶುಪಾಲನಿಗೆ ಕೊಡಬೇಕೆಂದು ಹಟ ಹಿಡಿದಿದ್ದನು. ರುಕ್ಮಿಣೀ ದೇವಿಯು ತನ್ನ ಮನದೊಲವಿನ ಕೃಷ್ಣನಲ್ಲಿಗೆ ದೂತನನ್ನಟ್ಟಿದಳು. ಮದುವೆಯ ದಿನವೇ ಕೃಷ್ಣನು ರುಕ್ಮಿಣಿಯನ್ನು ಅಪಹರಿಸಿಕೊಂಡು ಬಂದು ದ್ವಾರಕಿಯಲ್ಲಿ ಮದುವೆಯಾದನು. ಇದರಿಂದ ರುಕ್ಮಿಗೆ ಮಾತ್ರವಲ್ಲದೆ ಶಿಶುಪಾಲನಿಗೂ ಕೃಷ್ಣನ ಮೇಲೆ ವೈರ ಸ್ಥಿರವಾಯಿತು. ಕಂಸವಧೆಯ ದೆಸೆಯಿಂದ ಜರಾಸಂಧ ನಿಗೆ ಇವನ ಮೇಲೆ ವೈರವಿದ್ದೇ ಇದ್ದಿತು. ಪ್ರಾಗ್ಜ್ಯೋತಿಷದ ಅರಸನಾದ ನರಕಾಸುರನು ದೇವಮಾನವರನ್ನೆಲ್ಲ ಪೀಡಿಸುತ್ತ ಸಜ್ಜನ ಕಂಟಕನಾಗಿದ್ದನು. ಕಾಶೀ ರಾಜ್ಯದ ದೊರೆಯಾದ ಪೌಂಡ್ರಕ ವಾಸುದೇವನೆಂಬವನು ಕೃಷ್ಣನ ಮಹಿಮಾತಿಶಯದ ಕಥೆಗಳನ್ನು ಕೇಳಿ ಕರುಬಿನಿಂದ ಅವನಮೇಲೆ ಹಗೆ ಸಾಧಿಸಲು ಹವಣಿಸುತ್ತಿದ್ದನು. ಶ್ರೀಕೃಷ್ಣನು ಭೂಭಾರ ನಿವೃತ್ತಿಗಾಗಿ ಈ ದುಷ್ಟರನ್ನೆಲ್ಲ ದಮನಮಾಡಲು ಸಮಯ ನಿರೀಕ್ಷಣೆ ಮಾಡುತ್ತಿರಲು ಒಂದು ದಿನ ದೇವೇಂದ್ರನೇ ಬಂದು ಕೃಷ್ಣದರ್ಶನ ಮಾಡಿ ನರಕಾಸುರನಿಂದ ತನಗೂ ತನ್ನವರಿಗೂ ಆಗುತ್ತಿದ್ದ ಪೀಡೆಯನ್ನು ನಿವಾರಿಸಬೇಕೆಂದು ಬೇಡಿ ಕೊಂಡನು.

ಇಂದ್ರನ ಪ್ರಾರ್ಥನೆಯನ್ನು ಮನ್ನಿಸಿ ಶ್ರೀಕೃಷ್ಣನು ಗರುಡಾರೂಢ ನಾಗಿ ನರಕಾಸುರನ ಪಟ್ಟಣಕ್ಕೆ ವಿಜಯ ಮಾಡಿಸಿದನು. ಹಿಮಗಿರಿಯ ಪ್ರಾಂತದಲ್ಲಿದ್ದ ಆ ಪಟ್ಟಣದ ಕೋಟೆಯನ್ನು ಕೌಮೋದಕೀಗದೆಯಿಂದ ಹೊಡೆದು ಕೆಡವಿ ಅದರ ಸುತ್ತಿನ ಕಂದಕದ ನೀರನ್ನು ಆಗ್ನೇಯಾಸ್ತ್ರದಿಂದ ಇಂಗಿಸಿ ಪುರಪ್ರವೇಶಮಾಡಿ ತನ್ನ ಶಂಖವನ್ನೂದಿ ನರಕಾಸುರನನ್ನು ಕೆರಳಿಸಿ

ದನು. ಅವನ ಕಡೆಯುವನಾದ ಮುರನೆಂಬ ರಾಕ್ಷಸನು ಮೊದಲು ಕೃಷ್ಣನ ಮೇಲೆ ನುಗ್ಗಿಬಂದನು. ಆದರೆ ಮಹಾವಿಷ್ಣುವಿನ ಮುಂದೆ ಅವನಾಟ ನಡೆದೀತೆ? ಮುರನು ಕೃಷ್ಣನ ಅಸ್ತ್ರಧಾರೆಯಿಂದ ನಿರಸ್ತ್ರನಾದನು. ಅವನ ಬಿಲ್ಲು ಮುರಿಯಿತು. ತನ್ನ ಗದೆಯನ್ನು ಅವನು ಕೃಷ್ಣನ ಮೇಲೆ ಬೀಸಲು ಸುದರ್ಶನ ಚಕ್ರವು ಅದನ್ನು ನುಚ್ಚುನೂರಾಗಿ ಖಂಡಿಸಿತು; ಮುರನ ತಲೆಯನ್ನು ನೆಲಕ್ಕೆ ಉರುಳಿಸಿತು.

ಮುರಾಸುರನ ವಧೆಯಸುದ್ದಿ ತಿಳಿದು ದೈತ್ಯೇಶ್ವರನಾದ ನರಕಾಸುರನೇ ಸ್ವಯಂ ಗಜಾರೂಢನಾಗಿ ಬಂದು ಕಾಳಗಕ್ಕೆ ತೊಡಗಿದನು. ಶ್ರೀಕೃಷ್ಣನು ಘನಘೋರವಾದ ಸಂಗ್ರಾಮವನ್ನು ನಡೆಸಿ ಏಕಾಂಗ ಸಾಹಸವನ್ನು ಮೆರೆದು ನರಕಾಸುರನನ್ನು ನರಕಕ್ಕೇ ಕಳುಹಿಸಿ ಭೂಮಿಯನ್ನು ನಿಷ್ಕಂಟಕವಾಗಿಸಿದನು.

ಧರ್ಮಸಂಸ್ಥಾಪಕನಾದ ಶ್ರೀಕೃಷ್ಣನು ಧರ್ಮವಿರೋಧಿಯಾದ ನರಕಾಸುರನನ್ನು ಕೊಂದನಾದರೂ ಅವನ ರಾಜ್ಯವನ್ನು ಅವನ ಮಗನಿಗೇ ಕೊಟ್ಟು ಸೆರೆಯಲ್ಲಿದ್ದ ರಾಜರನ್ನೆಲ್ಲ ಬಿಡುಗಡೆಮಾಡಿಸಿದನು.

ಧರ್ಮರಾಯನು ಮಾಡಿದ ರಾಜಸೂಯ ಯಾಗಕ್ಕೆ ನೆರವಾಗಿ ಶ್ರೀಕೃಷ್ಣನು ಅಗ್ರಪೂಜೆಯನ್ನು ಸ್ವೀಕರಿಸುವ ಸಮಯದಲ್ಲಿ ಹಿಂದಿನ ವೈರವನ್ನು ಸಾಧಿಸಲು ಹೊರಟು ನೀಚ ಭಾಷೆಗಳನ್ನಾಡಿದ ಶಿಶುಪಾಲನನ್ನು ಕೊಂದನು. ಪೌಂಡ್ರಕ ವಾಸುದೇವನು ದ್ವಾರಕಿಗೆ ದೂತನನ್ನಟ್ಟಿ ಸಮರ ಭಿಕ್ಷೆಯನ್ನು ಕೇಳಲು ವಾರಣಾಸಿಗೆ ಬಂದು ಪೌಂಡ್ರಕನ ಮನೋರಥವನ್ನು ಕರುಣಿಸಿದನು. ಯುದ್ಧದಲ್ಲಿ ಪೌಂಡ್ರಕನ ತಲೆ ಸುದರ್ಶನ ಚಕ್ರಕ್ಕೆ ಆಹುತಿಯಾಯಿತು.

ಶ್ರೀಕೃಷ್ಣನು ತಾನೇ ಸ್ವಂತವಾಗಿ ಅನೇಕ ರಾಕ್ಷಸರನ್ನು ಕೊಂದು ದಾನವಾಂತಕನೆಂಬ ಬಿರುದನ್ನು ಗಳಿಸಿದನಲ್ಲದೆ ಪರಹಸ್ತಗಳಿಂದಲೂ ದಾನವ ವಧೆಮಾಡಿಸಿದನು. ಹಲವು ಸಾರಿ ಮಧುರೆಯನ್ನು ಮುತ್ತಿ ರಕ್ತಪಾತಕ್ಕೆ

ಕಾರಣನಾದ ಜರಾಸಂಧನನ್ನು ಶ್ರೀಕೃಷ್ಣನು ಜಗಜಟ್ಟಿಯಾದ ಭೀಮಸೇನನ ಕೈಲಿ ಸೀಳಿಸಿ ಕೊಂದನು.

## ನರನಾಟಕ

ಶಿಶುತನದಲ್ಲಿಯೇ ಅನೇಕ ಭೀಕರ ರಾಕ್ಷಸರನ್ನು ಕೊಂದು, ಯಶೋದೆ, ದೇವಕಿ, ವಸುದೇವ ಮೊದಲಾದವರಿಗೆ ಹಲವು ಸಲ ತನ್ನ ದಿವ್ಯರೂಪವನ್ನೂ ತೋರಿಸಿ, ಗೋವರ್ಧನದಂಥ ಬೆಟ್ಟವನ್ನೇ ಕಿತ್ತು, ನಾನಾರೀತಿಗಳಲ್ಲಿ ತನ್ನ ದೈವೀಮಹಿಮೆಯನ್ನು ಪ್ರದರ್ಶಿಸಿದರೂ ಶ್ರೀಕೃಷ್ಣನು ಮಾನುಷಾವತಾರದ ನಾಟಕವನ್ನು ಬಹಳ ಚೆನ್ನಾಗಿ ನಟಿಸಿದ್ದಾನೆ. ಗೊಲ್ಲರಲ್ಲಿದ್ದಾಗ ದನಕರುಗಳನ್ನು ಕಾದುದಲ್ಲದೆ ಗೋಪಬಾಲಕರ ಒಡನಾಡಿಯಾಗಿ ಬೇಕಾದ ಹಾಗೆ ಹುಡುಗತನದ ಆಟಗಳನ್ನು ಆಡಿದ್ದಾನೆ. ಎಲ್ಲ ಹುಡುಗರಂತೆ ಗುರುಕುಲ ವಾಸಮಾಡಿ ವಿದ್ಯೆಕಲಿತಿದ್ದಾನೆ. ಆ ಸಮಯದಲ್ಲಿ ಗುರುಪತ್ನಿಯ ಮಾತಿನಂತೆ ಒಂದು ದಿನ ಸೌದೆಗೆಂದು ಕಾಡಿಗೆ ಹೋಗಿ ಗಾಳಿಮಳೆಗಳಿಗೆ ಸಿಕ್ಕಿ ಬಹಳವಾಗಿ ನೊಂದನಂತೆ! ಕತ್ತಲೆಯಲ್ಲಿ ಮನೆಗೆ ಹಿಂತಿರುಗಲಾರದೆ ಛಳಿಗೆ ನಡುಗುತ್ತ ಒಡನಾಡಿಯಾದ ಸುದಾಮನನ್ನು (ಇವನೇ ಮುಂದೆ ಕುಚೇಲನೆಂಬ ಹೆಸರಿನಿಂದ ಪ್ರಸಿದ್ಧನಾಗಿದ್ದಾನೆ) ತಬ್ಬಿಕೊಂಡು ರಾತ್ರಿಯನ್ನು ಹೇಗೋ ಕಷ್ಟದಿಂದ ಕಳೆದನಂತೆ! ಗೋವರ್ಧನ ಪರ್ವತವನ್ನೇ ಕೊಡೆಯಂತೆ ಎತ್ತಿ ಹಿಡಿದ ಕೃಷ್ಣನು ಈ ಪ್ರಸಂಗದಲ್ಲಿ ಅಸಹಾಯನಾಗಿ ಮಳೆಯಲ್ಲಿ ನೆಂದುಹೋದನು!

ದೇವರಾದರೆ ತಾನೆ ಏನು? ಭೂಲೋಕದಲ್ಲಿ ಮಾನವನಾಗಿ ಹುಟ್ಟಿದ ಮೇಲೆ ಮಾನವ ಜೀವನದ ಸುಖದುಃಖಗಳು ಬಾಧಿಸದೆ ಹೋಗವು. ಶ್ರೀಕೃಷ್ಣನಂಥ ದೇವತಾಪುರುಷನೂ ಇದಕ್ಕೆ ಹೊರತಲ್ಲ; ಸತ್ರಾಜಿತನೆಂಬ ಯಾದವನು ಸೂರ್ಯಾನುಗ್ರಹದಿಂದ ಸಂಪಾದಿಸಿದ ಶಮಂತಕ ಮಣಿಯನ್ನು ಯದುನೃಪಾಲನಿಗೆ ಕೊಡಬೇಕೆಂದು ಕೇಳಿದ ತಪ್ಪಿನಿಂದ ಅಪಕೀರ್ತಿಗೆ ಸಿಕ್ಕು ನೋಯಬೇಕಾಯಿತು. ಸತ್ರಾಜಿತನ ತಮ್ಮ ಆ ರತ್ನವನ್ನು ಧರಿಸಿ ಬೇಟೆಗೆ ಹೋಗಿ ಒಂದು ಸಿಂಹಕ್ಕೆ ಸಿಕ್ಕಿ ಸತ್ತನು. ಆ ಸಿಂಹವನ್ನು ಜಾಂಬ

ವನು ಕೊಂದು ಆ ರತ್ನವನ್ನು ಕೈಕೊಂಡು ತನ್ನ ಬಿಲವನ್ನು ಹೊಕ್ಕನು. ಆದರೆ ಇದನ್ನೆಲ್ಲ ಅರಿಯದ ಸತ್ರಾಜಿತನ ಕಡೆಯವರು ಕೃಷ್ಣನೇ ಮಣಿಯ ಆಸೆಯಿಂದ ಪ್ರಸೇನನನ್ನು ಕೊಂದಿರಬೇಕೆಂದು ತರ್ಕಿಸಿ ಅವನಮೇಲೆ ಅಪವಾದ ಹೊರಿಸಿದರು.

ಶ್ರೀಕೃಷ್ಣನು ಏನೂ ಅರಿಯದ ಮಾನವನಂತೆ ಅಪಕೀರ್ತಿಗೆ ನೊಂದು ಮಣಿಯನ್ನು ಹುಡುಕಿಕೊಂಡು ಹೊರಟು ಹೆಜ್ಜೆಯ ಗುರುತು ಹಿಡಿದುಹೋಗಿ ಜಾಂಬವನ ಬಿಲವನ್ನು ಪ್ರವೇಶಿಸಿ ಆ ಕರಡಿಯೊಡನೆ ಇಪ್ಪತ್ತು ದಿನ ಹೋರಾಡಿ ಕಡೆಗೆ ಆ ಮಣಿಯನ್ನೂ ಅದರ ಜತೆಯಲ್ಲಿ ಜಾಂಬವನ ಮಗಳನ್ನೂ ಸಂಗ್ರಹಿಸಿಕೊಂಡು ದ್ವಾರವತಿಗೆ ಹಿಂತಿರುಗಿ ಸತ್ರಾಜಿತನಿಗೆ ಮಣಿಯನ್ನೊಪ್ಪಿಸಿದನು. ಆದರೆ ಇದು ಇಷ್ಟಕ್ಕೆ ನಿಲ್ಲಲಿಲ್ಲ. ಕೃಷ್ಣನು ಪಾಂಡವ ದರ್ಶನಾರ್ಥವಾಗಿ ಶಕ್ರಪ್ರಸ್ಥಪುರಕ್ಕೆ ಹೋಗಿರಲು ಶತಧನ್ವನು ಮಣಿಯ ಆಸೆಯಿಂದ ಸತ್ರಾಜಿತನನ್ನು ಕೊಂದನು. ಆದರೆ ಮಣಿ ಆತನಲ್ಲಿರಲಿಲ್ಲ. ಸಾಯುವ ಮುಂಚೆ ಅದನ್ನು ಅವನು ಅಕ್ರೂರನ ಕೈಯಲ್ಲಿ ಕೊಟ್ಟಿದ್ದನು. ಅಕ್ರೂರನು ಕಾಶಿಗೆ ಹೋಗಿ ಸ್ವಸ್ಥನಾಗಿದ್ದುಬಿಟ್ಟಿದ್ದನು. ಸತ್ರಾಜಿತನ ಮರಣವಾರ್ತೆ ಕೇಳಿ ಕೃಷ್ಣಬಲರಾಮರಿಬ್ಬರೂ ಆತುರದಿಂದ ಬಂದು ಶತಧನ್ವನನ್ನು ಬೆನ್ನಟ್ಟಿ ಹೋದರು. ಕಡೆಗೆ ಅವನು ಕೃಷ್ಣನ ಕೈಗೆ ಸಿಕ್ಕಿ ಸತ್ತನು. ಆದರೆ ಅವನಲ್ಲಿ ಮಣಿಯಿರಲಿಲ್ಲ. ಕೃಷ್ಣನು ಬಲರಾಮನಿಗೆ ಈ ಸುದ್ದಿ ಹೇಳಿದಾಗ ಅವನಿಗೆ ನಂಬಿಕೆ ಹುಟ್ಟಲಿಲ್ಲ; ಕೃಷ್ಣನೇ ಮಣಿಯನ್ನು ಬಚ್ಚಿಟ್ಟುಕೊಂಡು ತನಗೆ ಹೀಗೆ ಸುಳ್ಳುಹೇಳುತ್ತಿರುವನೆಂದುವಾದಿಸಿ ಕೃಷ್ಣನೊಡನೆ ರಾಜಧಾನಿಗೆ ಬರದೆ ವಿದೇಹ ನಗರಕ್ಕೆ ಹೊರಟು ಹೋದನು. ಮಣಿಯ ನಿಮಿತ್ತದಿಂದ ಅಣ್ಣನಿಗೇ ತಮ್ಮನ ಮೇಲೆ ಶಂಕೆ! ಈ ಅಪವಾದವನ್ನು ಕಳೆದುಕೊಳ್ಳಲು ಬಹಳ ಕಾಲ ಶ್ರಮಿಸಬೇಕಾಯಿತು.

ದ್ವಾರವತಿಯಲ್ಲಿ ವೈಭವದಿಂದಿರುವಾಗ ತನ್ನ ಬಾಲ್ಯಸ್ನೇಹಿತನಾದ ಕುಚೇಲನು ಐಶ್ವರ್ಯವನ್ನು ಬೇಡುವ ಸಲುವಾಗಿ ಬರಲು ಶ್ರೀಕೃಷ್ಣನು ಅವನನ್ನು ದೂರದಿಂದಲೇ ಕಂಡು ಗುರುತಿಸಿ ಇದಿರುಗೊಂಡು ಪರಮಾದರ

ದಿಂದ ಬರಮಾಡಿಕೊಂಡು ಅರ್ಘ್ಯಪಾದ್ಯಗಳನಿತ್ತು ಸತ್ಕರಿಸಿ ತನ್ನ ಅರಮನೆಯಲ್ಲಿಯೇ ನಿಲ್ಲಿಸಿಕೊಂಡು ಆತನಿಗೆ ಬೇಕು ಬೇಕಾದ ಉಪಚಾರಗಳನ್ನೆಲ್ಲ ಮಾಡಿ ಬಾಲ್ಯದ ಕಥೆಗಳನ್ನೆಲ್ಲ ಸ್ಮರಿಸಿಕೊಂಡು ಗೋಷ್ಠಿಯನ್ನು ಸಲ್ಲಿಸಿ ಆತನಿಂದ ಉಪಾಯನವನ್ನು ಬೇಡಿ ಆತನಲ್ಲಿದ್ದ ಅವಲಕ್ಕಿಯನ್ನು ಮೆದ್ದನಂತೆ! ಪ್ರಭು ಪದವಿಯಲ್ಲಿದ್ದ ತನ್ನ ಹಿಂದಿನ ಗೆಳೆಯನು ಕಡು ಬಡವನಾದ ತನ್ನನ್ನು ಸ್ವಾಗತಿಸಿದ ರೀತಿಗೆ ಬೆಗಡುಗೊಂಡು ಕುಚೇಲನು ತಾನು ಬಂದ ಉದ್ದೇಶವನ್ನೇ ಮರೆತು ಹೋದನು. ಆದರೆ ಭಗವಂತನು ಅದನ್ನು ಮರೆಯಲಿಲ್ಲ. ಕುಚೇಲನು ಕೇಳದಿದ್ದರೂ ಅವನಿಗೆ ಸಕಲಭಾಗ್ಯವನ್ನೂ ಅನುಗ್ರಹಿಸಿದನು. ಆದರೆ ಅರಮನೆಯಿಂದ ಹೊರಡುವಾಗ ಕುಚೇಲನು ತಾನು ಉಟ್ಟಿದ್ದ ಅವರ್ಘ್ಯವಸ್ತ್ರಾಭರಣಗಳನ್ನು ಕಳಚಿಟ್ಟು ತನ್ನ ಮೊದಲಿನ ವಸ್ತ್ರಗಳನ್ನೇ ಧರಿಸಿ ಹೊರಟನಂತೆ! ತನ್ನ ಮನೆಯನ್ನು ಸಮೀಪಿಸುವತನಕ ಕೃಷ್ಣನ ನಾಟಕ ತಿಳಿಯಲಿಲ್ಲ!

ಶ್ರೀಕೃಷ್ಣನು ಹೀಗೆ ನರನಾಟಕವನ್ನು ನಟಿಸಿದರೂ ಚಾಣಾಕ್ಷರಾದ ಭಕ್ತರು ಅವನ ದೇವತ್ವವನ್ನು ತಿಳಿಯದೆ ಹೋಗಲಿಲ್ಲ. ಅಕ್ರೂರ, ಪಾರ್ಥ, ಧರ್ಮರಾಯ, ಭೀಷ್ಮಾದಿಗಳು ಕೃಷ್ಣನನ್ನು ದೇವರೆಂದೇ ನಂಬಿಗೌರವಿಸಿದರು. ಇಂಥಾ ಆಶ್ರಿತ ವಾತ್ಸಲ್ಯ, ಧರ್ಮ ಪಕ್ಷಪಾತ, ದೀನೋದ್ಧಾರ ತತ್ಪರತೆ, ಅನುಪಮಶೌರ್ಯ ಸಾಹಸಗಳುಳ್ಳ ಮಾನವನನ್ನು ಜನ ದೇವರೆಂದೇ ಭಾವಿಸುವುದರಲ್ಲಿ ಆಶ್ಚರ್ಯವೇನಿದೆ? ಶ್ರೀಕೃಷ್ಣನು ದೇವನಾಗಿರಲಿ, ಮಾನವನಾಗಿರಲಿ, ಅವನ ಗುಣಾತಿಶಯಗಳಿಂದ ಲೋಕಕ್ಕೆ ಪಾವನಮೂರ್ತಿಯಾಗಿ ಪೂಜನೀಯನಾಗಿದ್ದಾನೆ.

——o——

# ಗ್ರಂಥ ಪಾಠ

ಈ ಪುಸ್ತಕದ ಪಾಠವನ್ನು ಮೂರು ಓಲೆಯ ಪ್ರತಿಗಳ ಆಧಾರದಿಂದ ಗೊತ್ತುಮಾಡಿದೆ. ಮೊದಲನೆಯದು ಸೆಂಟ್ರಲ್ ಕಾಲೇಜಿನಲ್ಲಿ ತೆಲುಗು ಅಧ್ಯಾಪಕರಾಗಿದ್ದ ವಿದ್ವಾನ್ ಶ್ರೀ ವೆಂಕಟಾದ್ರಿಶರ್ಮರವರು ದಯೆಯಿಟ್ಟು ಕೊಟ್ಟ ಪುಸ್ತಕ. ಇದರಲ್ಲಿ ಹನ್ನೆರಡು ಸ್ಕಂಧಗಳೂ ಸಮಗ್ರವಾಗಿವೆ. ಇದನ್ನು 'ಕ' ಎಂದು ಕರೆದಿದೆ. ಎರಡನೆಯದು ಮೈಸೂರು ಓರಿಯಂಟಲ್ ಲೈಬ್ರರಿಯ K. I. ಎಂಬ ಪ್ರತಿ. ಇದೂ ಹನ್ನೆರಡುಸ್ಕಂಧಗಳನ್ನು ಉಳ್ಳ ಶುದ್ಧವಾದ ಪ್ರತಿ. ಇದನ್ನು 'ಖ' ಎಂದು ಕರೆದಿದೆ. ಮೂರನೆಯದು ಅದೇ ಲೈಬ್ರರಿಯ K 96. ಎಂಬ ಪ್ರತಿ. ಇದರಲ್ಲಿ 10, 11, ಮತ್ತು 12 ನೆಯ ಸ್ಕಂಧಗಳು ಮಾತ್ರ ಇವೆ. ಮಧ್ಯೆ ಕೆಲವು ಓಲೆಗಳು ಹೋಗಿವೆ. ಇದನ್ನು 'ಗ' ಎಂದು ಕರೆದಿದೆ. ಪ್ರಾಯಿಕವಾಗಿ ಮೂರು ಪ್ರತಿಗಳಿಗೂ ಸಮಾನವಾದ ಪಾಠಗಳನ್ನೇ ಅಂಗೀಕರಿಸಿದೆ. ಸಂದೇಹಬಂದ ಒಂದೆರಡು ಕಡೆಗಳಲ್ಲಿ ಮಾತ್ರ ಓರಿಯಂಟಲ್ ಲೈಬ್ರರಿಯ ಬೇರೆ ಎರಡು ಪ್ರತಿಗಳನ್ನೂ ನೋಡಲಾಯಿತು.

ಕೆ. ವಿ.



ಶ್ರೀ

# ಕೃಷ್ಣ ಚರಿತೆ

## ೧

## ಪೀಠಿಕೆ

ಶ್ರೀವರನು ಶಾಶ್ವತನಖಿಳವೇ
ದಾವಳೀ ಸಂಸ್ತುತ್ಯ ನಮಿತಗು
ಣಾವಲಂಬನನಂಬುಜೋದ್ಭವಮುಖ್ಯ ಸುರವಂದ್ಯ
ದೇವದೇವನಶೇಷ ಧರಣೀ
ದೇವ ಗೋದ್ವಿಜರಕ್ಷಣಾರ್ಥಕೃ
ತಾವತಾರನು ಮಾಳ್ಕೆ ಯೋಗಕ್ಷೇಮವನು ನಮಗೆ ೧

ನಿಗಮ ಕಲ್ಪಮಹಾದ್ರುಮದ ಶಾ
ಖೆಗಳ ತುದಿಯಲಿ ತೋರ್ಪ ಪರರಿಗೆ
ಬಗೆಯಬಾರದ ಪರಮ ತತ್ವಾಮೃತ ರಸಾಯನವ
ಸೊಗಯಿಸುವ ಭಾಗವತ ಫಲವನು
ಜಗಕೆ ದಯೆಯಿಂದಿತ್ತ ಕರುಣಾ
ಳುಗಳ ದೇವನು ಶುಕನು ಮಾಳ್ಕೆ ಶುಭೋದಯವ ನಮಗೆ ೨

ಭಾಗವತದರ್ಥವನು ಸಂಗ್ರಹ
ವಾಗಿ ಬಲ್ಲಂದದಲಿ ವಿಷಯವಿ
ಭಾಗವನು ತತ್ತತ್ಪ್ರಯೋಜನಸಜನಿತ ಸಿದ್ಧಿಯನು
ರಾಗದಿಂದರುಪುವೆನಖಿಳಭವ
ರೋಗ ಹರವಿದೆನಲ್ಕೆ ಮಾಳ್ಕೆ ಮ
ಹಾಗುಣಜ್ಞರು ಕಾವ್ಯಸಾರಥ್ಯವನು ಸಜ್ಜನರು ೩

ಕನ್ನಡದ ಕೃತಿಯೆಂದವಜ್ಞಾ
ಪನ್ನರಾಗದಿರಕಟ ದರ್ಪಣ
ಕನ್ನಡಿ ಯಿದೆಂದೆಂದಡಾವುದು ಕೊರತೆ ನೋಡುವಡೆ
ತನ್ನ ಮುಖಸಂದರುಶನವಲಾ ಪ್ರತಿ
ಪನ್ನಫಲ ಹರಿಗುಣ ಚರಿತ್ರದ
ವರ್ಣನೆಗೆ ಕುಂದೇನು ಭಾಷಾಭೇದದಲಿ ಕೃತಿಯು ೪

ಹರಿಗುಣಸ್ತುತಿ ಹರಿಪರಾಯಣ
ಶರಣಜನ ಸತ್ಕೀರ್ತಿಸಂಸ್ತುತಿ
ಹರಿಪದಾಂಬುಜಭಕ್ತಿ ತತ್ಸಾಧನದ ವಿಸ್ತಾರ
ಹರಿನಿಜಜ್ಞಾನೋಪಲಾಲಿತ
ಪರ್ಥತರಾನಂದಾನುಭವ ವಿನಿ
ತಿರದೆ ವಿಸ್ತರವೆನಲು ವರ್ಣಿಸ ತಕ್ಕುದಿದರೊಳಗೆ ೫

ಅನಶನ ವ್ರತದಲಿ ಪರೀಕ್ಷಿತ
ಜನಪನಿರೆ ಭಾಗೀರಥಿಯು ಪಾ
ವನವೆನಿಸಿದುತ್ತರ ದಿಶಾಭಾಗದಲಿ ಪರಿವಡಿಸಿ
ಮುನಿನಿಕರವೈದಿರಲು ಕರುಣಾ
ವನಧಿ ವೇದವ್ಯಾಸ ನಂದನ
ನನುಪಮಂಗಭಿವರ್ಣಿಸಿದನಿದನ ಧಿಕ ಕರುಣದಲಿ ೬

## ೨

# ದೇವಕಿಯ ಮದುವೆ

ಅರಸ ಕೇಳಾ ಮಧುರೆಯೆಂಬಾ
ಪುರದೊಳಗೆ ದೇವಕನ ಮಗಳನು
ಪರಮ ಕನ್ಯಾರತ್ನವನು ದೇವಕಿಯನೊಂದುದಿನ
ಪುರುಷವೇಷದ ಧರೆಯ ಜಂಗಮ
ಹರುಷವೆನಿಪ ಯದೂತ್ತಮನು ಪತಿ
ಕರಿಸಿದನು ವೈವಾಹಿಕದಲಂದೊಲಿದು ವಸುದೇವ ೧

ಆದುದುತ್ಸವ ವೇನನೆಂಬೆನು
ಯಾದವರ ಪುರದೊಳಗೆ ತಳಿತುದು
ಮೇದಿನೀಶ ಮಹಾವಿಧಾನ ವಿವಾಹ ವಿಸ್ತಾರ
ಆದರದ ಹೂವಲಿಯ ರಚನೆಯ
ಬೀದಿಗಳ ಬಹುವಿಧ ವಿತಾನದ
ನಾದನಿರ್ಭರ ಭೂರಿ ಭೇರೀ ಬಹುಳ ರಭಸದಲಿ ೨

ಕರಿತುರಗರಥ ಪಾದವಾತಿಗ
ಳುರವಣಿಸಿ ಹೊಱವಡಲು ರಥವನು
ವರವಧುಗಳೇಱಿದರು ಬಹಳಚ್ಛತ್ರ ಚಾಮರದಾ
ಭರದಲದ್ದುದು ಗಗನ ಸುರರಂ
ಬರದಲಾಡಲು ವೇಣು ವೀಣಾ
ಮುರಜ ಶಂಖಧ್ವನಿ ಘಡಾಳಿಸಲೆಂಟುದಿಕ್ಕಿನಲಿ ೩

ಆ ಮಹೋತ್ಸವದೊಳಗೆ ಕಂಸ ಸ
ನಾಮನಾತಂಗಿಯನು ಮನ್ನಿಸು
ತಾ ಮಹಾರಥದೊಳಗೆ ವಾಘೆಯ ಪಿಡಿದು ಕುಳ್ಳಿರ್ದು
ಪ್ರೇಮದಿಂದೆಸಗುತಿರೆ ಮೇಘ
ಸ್ತೋಮ ಮೊಳಗುವವೋಲು ವಿಭವವಿ
ರಾಮವಾಗಲು ನುಡಿದುದೊಂದು ಮಹಾ ನಭೋನಿನದ ೪

ಎಲವೊ ಕೇಳೆಲೆ ಕಂಸ ಖೂಳರ
ತಿಲಕ ತಂಗಿಯ ಮೋಹ ದಾನಾ
ನಲನೆ ಮೋಹವಿದಱಿತುಕೊಳ್ಳೆಂಟನೆಯ ಗರ್ಭದಲಿ
ನಳಿನನಾಭನು ಜನಿಸಿ ನಿನ್ನಯ
ತಲೆಯ ಮುಱಿದಪನೆಂದು ನಭದಲಿ
ಮೊಳಗುವಂತಿರೆ ನುಡಿದಡಂಗಿದುದೊಂದು ಘನರಭಸ ೫

ಮಂಗಳದ ಬೆಳಗೈಯಲಕಟಕ
ಟಂಗಳದ ಮಳೆಗರೆದ ತೆರನಾ
ಯ್ತಂಗದಲಿ ಭಯಹೊಯ್ತು ಖಳನದ ಕೇಳಿದಾ ಕ್ಷಣಕೆ
ಕಂಗಳಲಿ ಕಿಡಿಗೆದರೆ ಫಡಫಡ
ತಂಗಿಯೋ ತನ್ನೊಡಲ ಕೇಡಿನ
ಸಿಂಗಿಯೋ ಸಾರೆನುತ ಕೊಂಡನು ಜಡಿವಡಾಯುಧವ ೬

ಕೆಡೆಯೆನುತ ಬಾಲಕಿಯ ಮುಂದಲೆ
ವಿಡಿದು ಮದುವೆಯ ರಥದ ಹಲಗೆಯ
ಕೆಡೆಯೊದೆದು ಕೂರಸಿಯ ಕೊರಳಿಗೆ ಮೋಹುತಿರೆ ಕಂಡು
ನಡುಗಿದನು ವಸುದೇವನಬಲೆಯ
ಕಡು ನಿರೋಧಸ್ಥಿತಿಗೆ ಹೋಹೋ
ಕೆಡಿಸದಿರು ಕೊಲ್ಲದಿರೆನುತ್ತ ಡ್ಡವಿಸುತಿಂತೆಂದ ೭

ಕೂರಸಿಗೆ ಕೈಯೊಡ್ಡಿ ಕೇಳಿಲೆ
ವೀರ ವಿಮಳಪರಾಕ್ರಮನೆ ನೀ
ನಾರು ನೆನೆದುದಿದೇನು ವೈವಾಹಿಕ ಮಹೋತ್ಸವದಾ
ಭಾರವಣೆ ಲೇಸಾಯ್ತು ಹೆಂಗೊಲೆ
ವೀರರಿಗೆ ವೈಸಿರಿಯೆ ತಂಗಿಗೆ
ಪಾರಿಬರುಹವೆ ಕೊರಳ ಖಡ್ಗದ ಧಾರೆ ಲೇಸೆಂದಾ ೮

ಕರುಣವಿಲ್ಲಲೆ ಪಾಪಿ ನಿನಗೀ
ತರುಣಿಯನು ಕೊಲುವಲ್ಲಿ ತಂಗಿಯ
ಕೊರಳ ನೋಡಾ ನಡುಗುತಿದೆ ಬೆವರಿಡುವ ಕಾಯದಲಿ
ಹರಹರಾರಿದ ನೆನೆವರಿಂತಾ
ದರಿಸದೀ ಮದುವೆಯಲಿ ಮಂಗಳ
ವಿರಚನೆಯಲೀ ವೈಪರೀತ್ಯವಿವೇಕೆ ನಿನಗೆಂದಾ ೯

ಕೊಂದವಗೆ ಕೊಲೆ ತಪ್ಪಲಱಿವುದೆ
ತಂದೆ ಬಱಿದೇ ಬಯಲ ಮಾತಿಗೆ
ಕೊಂದು ನೀನೇಕಿಳಿವೆ ನರಕಕೆ ಸಂಬಳವ ನೆರಹಿ
ಹೊಂದಿದವರೇ ಮಗುಳೆ ಕೊಲುವರು
ಕೊಂದವರನಂತವರ ಕೈಯಲಿ
ಹೊಂದುವರು ಹಗೆ ಹಲವು ಜನ್ಮಾಂತರಕೆ ಬಿಡದೆಂದಾ ೧೦

ಆರು ಹೇಳಿದರಾತ್ಮವಿದ್ಯೆಯ
ಸಾರವನು ನಿನಗಿದನು ನಿನ್ನೀ
ನಾರಿಗುಪದೇಶಿಸುವುದೊಡಲಿದು ನಿತ್ಯವಲ್ಲೆಂದು
ಆರುಕೊಲುವರು ಕೊಲಿಸಿಕೊಂಬವ
ರಾರು ಸಾರೆಲವೆಲವೊ ಕೊಂದಡೆ
ಸಾಱಲಱಿಯದು ತನಗೆ ಪಾತಕವೆಂದು ಖಳ ಜಱಿದ ೧೧

ಕೊಲ್ಲು ತನ್ನನು ಖಡುಗವನು ತೆಗೆ
ಕೊಲ್ಲದಿರು ಬಾಲಕಿಯ ನೇತಕೆ
ತಲ್ಲಣಿಸಿದಪೆ ಪಾಪಿ ಹೋಹೋ ಮಾಣು ಮಾಣೆನಲು
ಮುಳ್ಳು ಕಾಲಲಿ ಮುಱಿದಡಕಟಾ
ಹುಲ್ಲು ಸುಡುವರೆ ಸಾಱೆಲವೊ ತಾ
ಬಲ್ಲೆನೆಲ್ಲವನೇಕೆ ನಿನಗೀ ಚಿಂತೆ ಹೋಗೆಂದ ೧೨

ಹಲವು ಪರಿಯಲಿ ನಾಲ್ಕುಪಾಯದ
ಬಳಕೆಯಲಿ ದುರ್ಬುದ್ಧಿಯನು ನೆಱೆ
ತಿಳುಹಲಱಿಯದೆ ನೋಡಿ ಮನದೊಳಗಳಲಿ ಬಿಸುಸುಯ್ದು
ಗಳದಲಿಕ್ಕಿದ ಮೃತ್ಯುಪಾಶವ
ಗೆಲುವುಪಾಯವದಾವುದೆಂದು
ಮ್ಮಳಿಸಿ ತನ್ನೊಳಗೆಂದನಾ ವಸುದೇವನುತ್ತರವ ೧೩

ಬಂದ ಮೃತ್ಯುವ ತಪ್ಪಿಸುವೆನಿದ
ನೊಂದು ಬಾರಿಗೆ ಬಾಲಕಿಗೆ ಮ
ತ್ತಿಂದೆ ಮೇಣದು ಬರಲಿ ನಾಳೆಯೆ ಬರಲಿ ದೈವದಲಿ
ಎಂದು ಮನದಲಿ ತಿಳಿದು ನಿಶ್ಚಯ
ದಿಂದ ಬೇವುತ್ತೊಡಲೊಳಗೆ ಕೃಪೆ
ಯಿಂದ ನಗುತಾ ಖಳನೊಡನೆ ವಸುದೇವನಿಂತೆಂದ ೧೪

ನಿರ್ಣಯವ ಕೇಳಾದಡೆಲೆ ಸಂ
ಪನ್ನ ಗುಣವಾರಿಧಿಯೆ ಹೇಳ್ವೆ
ನಿನ್ನ ಕೊಲುವವರಾರು ಸತಿಯೋ ಮೇಣು ತತ್ಸುತನೋ
ನನ್ನಿ ನಿನಗಾನೊಂದುಪಾಯವ
ಮನ್ನಿಸುವಡಿದ ನೆಂಬೆನೆನಗು
ತ್ಪನ್ನರಾದಾತ್ಮಜರನೀವೆನು ನಿನ್ನವಶಕೆಂದ ೧೫

ವನಿತೆಗುದುಭವಿಸಿದರ ನೆಲ್ಲರ
ನಿನಗೆ ಕೊಡುವೆನು ಮಕ್ಕಳನು ನೃಪ
ವನಹಿಮಾಂಶುವೆ ಕೊಲ್ಲದಿರು ಹಗೆಯಲ್ಲ ಸತಿ ನಿನಗೆ
ಜನದ ನುಡಿಗೆಡೆಯಾಗಬೇಡೆ
ನ್ನನುನಯುವ ಕೇಳಿನಲು ದುರ್ಮತಿ
ಮನದೊಳಗೆ ನೆಱೆನಂಬಿ ಬಿಟ್ಟನು ಸತಿಯ ಮುಂದಲೆಯ ೧೬

ಕಳುಹಿ ಮರಳಿದನತ್ತಲಾ ಖಳ
ತಿಲಕನರಮನೆಗಿತ್ತಲಾ ನಿಜ
ಲಲನೆ ಸಹಿತೈದಿದನು ತನ್ನಯ ಮನೆಗೆ ವಸುದೇವ
ಬಳಿಕ ಕಾಲಾಂತರಕೆ ಸತಿ ಮ
ಕ್ಕಳನು ನೆಱೆ ದಂಡಕ್ಕೆ ಧನವನು
ಗಳಿಸುವಂತಳಲುತ್ತ ಪಡೆದಳು ಪಾವಕೋಪಮರ ೧೭

ಕೀರ್ತಿಮಾನೆಂದೆಂಬ ತನ್ನಯ
ಪುತ್ರನನು ಮನದೊಳಗೆ ಮಱುಗುತ
ಸತ್ಯಸಂಧನು ನುಡಿಯ ಪಾಲಿಸಲೆಂದು ವಸುದೇವ
ಮೃತ್ಯುವಿಗೆ ಕೊಳ್ಳೆನುತ ಕಂಸಂ
ಗಿತ್ತಡದನೀಕ್ಷಿಸುತ ತೂಗಿದ
ನುತ್ತಮಾಂಗವನಕಟ ವಿಸ್ಮಿತನಾಗುತಿಂತೆಂದ ೧೮

ದೇವನೋ ದಿಟಕಲ್ಲದೊಡೆ ವಸು
ದೇವ ಸೀನಕಟಾತ್ಮ ವಿದ್ಯಾ
ಕೋವಿದರ ಕುಲದೈವವೋ ಹರಹರ ಮಹಾದೇವ
ಆವನಲಿ ದೊರೆಕೊಂಬುದೀ ಸ
ತ್ಯಾವಲಂಬನ ಧೈರ್ಯವೀ ದೃಢ
ಭಾವವೀ ಪರಿತೋಷವೀ ನಿರ್ವ್ಯಾಕುಲತೆಯೆಂದ ೧೯

ಕಂಡೆ ನಾನೀ ನಿನ್ನ ಸತ್ಯದ
ಗಂಡುಗಲಿತನದಿರವ ನೇತಕೆ
ಕೊಂಡು ಹೋಗೀ ಶಿಶುವನಳಲಿಸಲೀಕೆ ತಂಗಿಯನು
ಚಂಡಿಯೀ ನುಳಿದೇಳು ಮಕ್ಕಳ
ಕೊಂಡು ಫಲವೇನೆನಗೆ ಕಾಲನ
ದಂಡವಹನೆಂಟನೆಯ ಗರ್ಭದ ಶಿಶುವಲಾಯೆಂದ ೨೦

ಎನಲು ಮನದಲಿ ಶಂಕಿಸುತ ಕಂ
ಸನನು ಮನ್ನಿಸಿ ಮಾತಿನಲಿ ಸೈ
ಯೆನುತ ಕಳುಹಿಸಿಕೊಂಡು ಬಂದನು ಮನೆಗೆ ವಸುದೇವ
ವನಜಮುಖಿ ದೇವಕಿಗೆ ಮಕ್ಕಳು
ಜನಿಸಿದರು ಸುಖದುಃಖ ಹೇತುಗ
ಳೆನಿಸಲಱುವರು ಪಾಪಕರ್ಮಂಗಳ ಪೊಲತಿಬಲರು ೨೧

ಒಂದುದಿನ ಸುರನರಮಹೋರಗ
ಬೃಂದ ಪಾವನ ಚರಣಕಮಲ
ದ್ವಂದ್ವನೆನಿಸುವ ನಾರದನು ಮಧುರಾ ಪುರಾಂತರಕೆ
ಬಂದಡೀಕ್ಷಿಸುತಿದಿರು ನಡೆದಭಿ
ವಂದಿಸಲು ಕುಳ್ಳಿರ್ದು ಕಂಸಂ
ಗೆಂದನಮರರ ಗುಪಿತದುಸ್ಥಿತ ರಾಜಕಾರಿಯವ ೨೨

ಕುಶಲವೇ ನಿನಗಖಿಳ ಬಾಂಧವ
ವಿಸರ ಭೃತ್ಯಾಮಾತ್ಯ ವರ್ಗದ
ದೆಸೆಗೆ ಸುಖವೈ ಕ್ಷೇಮವೇ ಮಹಿಳಾ ಜನಂಗಳಿಗೆ
ವಸುಧೆ ನಿಷ್ಕಂಟಕವೆ ನಿನಗಾ
ರೊಸೆವವರು ವೈರಿಗಳು ಬಲ್ಲೈ
ಮಸುಳದೈ ನೃಪನೀತಿಯೆಂದನು ನಾರದನು ನಗುತ ೨೩

ಇಲ್ಲ ಹಿತವರು ನಿನಗೆ ಕಾರಿಯ
ವಲ್ಲ ಹಗೆಯಹ ಸುರರು ಯಾದವ
ರೆಲ್ಲ ನೀನೇ ಕಾಲನೇಮಿ ಸುರಾರಿ ಪೂರ್ವದಲಿ
ಬಲ್ಲೆ ನಾನಿದನಱಿವವರು ಪೆರ
ರಿಲ್ಲ ದೇವಕಿಯುದರದಲಿ ಸಿರಿ
ವಲ್ಲಭನು ಸಂಜನಿಸಿದಪ ನಿದನಱಿದುಕೊಳ್ಳೆಂದ ೨೪

ಬಱಿದೆ ಸಾಯದಿರಾರು ನೀನೆಂ
ದಱಿಯದೀ ಯಾದವರನಾ ರೆಂ
ದಱಿಯದೆನ್ನವರೆಂದು ನೆಱೆ ವಿಶ್ವಾಸವನು ಮಾಡಿ
ಮಱಸಿ ಗಂಟಲ ಕೊಯ್ದಪನು ಸಿರಿ
ಯೆಱೆಯ ನಿಂದೀ ರಾಜಕಾರ್ಯವ
ನಱಿತಿಹುದು ನಂದಾದಿಗೋಪರು ಸಹಿತ ಸುರರೆಂದ ೨೫

ಧರೆಯ ದುಷ್ಟ ಕ್ಷತ್ರರನು ಸಂ
ಹರಿಸಿ ಭೂಮಿಯ ಭಾರವನು ಪರಿ
ಹರಿಸಿ ಸುರರನು ರಕ್ಷಿಸುವ ಭರ ವಿಷ್ಣುವಿಂಗೆಂದು
ಒರೆದು ಕಂಸಂಗೆಲ್ಲವನು ಮುನಿ
ಸರಿದನಂಬರಗತಿಯಲತ್ತಲು
ಹೊರೆಗಳೆದ ಕಾಳೋರಗಂಗೆಣೆಯಾದನಮರಾರಿ ೨೬

ಎಲವೊ ಕರೆಕರೆ ಕಳ್ಳನನು ಕರೆ
ಕುಲಗೆಡುಕ ವಸುದೇವನನು ಮ
ಕ್ಕಳನು ತರಹೇಳೆನುತ ಗದ್ದುಗೆವೊಯ್ದು ನಿಂದಿರ್ದ
ಲಲನೆ ಮಱುಗಲು ಶಿಶುಗಳಾಱನು
ಶಿಲೆಯೊಳಪ್ಪಳಿಸಿದನು ನೆಱೆ ಸಂ
ಕಲೆಗಳಿಗೆ ವಸುದೇವ ದೇವಕಿಯರನು ನೂಕಿಸಿದ ೨೭

ತಂದೆಯುನು ಸಂಕಲೆಯುಲಿಟ್ಟಾ
ಮಂದಮತಿ ಯಾದವರು ಸುರರೆಂ
ದಂದು ಮೊದಲಾಗಖಿಳ ಮಿತ್ರ ಸಗೋತ್ರ ಬಾಂಧವರ
ವೃಂದವನು ಪರಿಭವಿಸಿ ಪಶುಧನ
ಮಂದಿರವನಪಹರಿಸಿ ಬಾಧಿಸ
ಲಂದು ದೇಶತ್ಯಾಗವನು ಮಾಡಿದುದು ಜನನಿವಹ ೨೮

ಅರಸ ಕೇಳಿಂತಾಱು ಮಕ್ಕಳು
ಸರಸಿಜಾನನೆಗುದಿಸಿ ಕಾಲನ
ಪುರಕೆ ಸಲಲೇಳನೆಯ ಗರ್ಭದಲುದಿಸಿ ದೇವಕಿಗೆ
ಹರುಷ ಶೋಕಪ್ರದವೆನಲು ಗೋ
ಚರಿಸಿತಾ ಸಾಕ್ಷಾತ್ತು ಧರಣೀ
ಧರನೆನಿಪ ಶೇಷಾವತಾರವನಂತನಾಜ್ಞೆಯಲಿ ೨೯

ಸಕಲ ಭುವನೇಶ್ವರನು ಸಕಲಾ
ತ್ಮಕನು ಕಂಡನು ಕಂಸಭಯವನು
ಶಕತಿಯೆನಿಸುವ ಮಾಯೆಗಾಜ್ಞಾಪಿಸಿದನಿದನೊಲಿದು
ಚಕಿತ ಗರ್ಭವ ನೊಯ್ವುದಾ ದೇ
ವಕಿಯಱಿಯದಂತಿರಲು ವರಬಾ
ಲಕಿಯ ರೋಹಿಣಿಯುದರದಲಿ ತಂದಿರಿಸು ಹೋಗೆಂದ ೩೦

ದುಷ್ಟ ಕಂಸಾಸುರ ಕುಲಾಧಮ
ನಟ್ಟುಳಿಗೆ ನಿಲಲಾಱದುಱೆ ಕಂ
ಗೆಟ್ಟು ದೆಸೆದೆಸೆಗೋಡಿ ವಸುದೇವನ ವಧೂನಿವಹ
ನೆಟ್ಟನಡಗಿರಲವರೊಳತ್ಯು
ತ್ಕೃಷ್ಟ ರೋಹಿಣಿ ಯೆಂಬಳೈದಳೆ
ಸೃಷ್ಟಿಕಾರಣೆ ನಂದಗೋಕುಲದೊಳಗೆ ಹೋಗೆಂದ ೩೧

ಬಳಿಕ ತಾನೇ ದೇವಕಿಯ ಬಸು
ಱೊಳಗೆ ತನುಗೊಂಡವನಿಭಾರವ
ಕಳೆಯಲುದುಭವಿಸಿದಪೆನಱಿ ಸಂದೇಹವಿಲ್ಲಿದಕೆ
ಇಳಿದು ನೀನಾ ನಂದಗೋಪನ
ಲಲನೆಯಲಿ ಸಂಜನಿಸು ಜೀವಾ
ವಳಿಗೆ ಜೀವಿಕೆಯಾಗು ತನಗೆಯೂ ತಂಗಿಯಾಗೆಂದ ೩೨

ದೇವ ದೇವನ ಬೆಸನ ಮಾಯಾ
ದೇವಿ ತಲೆಯಲಿ ಧರಿಸಿ ಪದದಲಿ
ಮೂವೆ ಬಲವಂದೆಱಗಿ ಹೋಗುವೆನೆನುತ ಬೀಳ್ಕೊಂಡು
ದೇವಕಿಯ ಜಠರದಲನಂತನ
ನೋವದೊಯ್ದಿರಿಸಿದಳು ರೋಹಿಣಿ
ದೇವಿಯೂದರದಲಾ ಕ್ಷಣದಲಾಳ್ದನ ನಿರೂಪದಲಿ ೩೩

## ೩

## ಶ್ರೀಕೃಷ್ಣ ಜನನ

ಬಳಿಕ ವೈಷ್ಣವ ಪರಮತೇಜವ
ಲಲನೆ ದೇವಕಿದೇವಿ ಜಠರದ
ಲಲಘುಮತಿ ಧರಿಸಿದಳು ನಿಗಮಪ್ರಕರಶಿರದಂತೆ
ಸಲೆ ಜಗನ್ಮಯ ನೊಳಗಿರಲು ತೊಳ
ತೊಳಗಿ ಬೆಳಗಿದಳೆಂಟು ದೆಸೆಗಳ
ನಿಳೆಗೆ ಜಂಗಮ ಬೊಮ್ಮವಿದ್ಯಾಮೂರ್ತಿಯಂದದಲಿ ೧

ಕಂಡನಾಕೆಯ ನಿಲವ ನತ್ಯು
ದ್ದಂಡ ತೇಜವನಾ ಪ್ರಭಾವವ
ಮಂಡಲಾಧಿಪ ಕಂಸನಿದಲೇ ತನ್ನ ಹಗೆಯೆನುತಾ
ಪುಂಡರೀಕದ ಕಣ್ಣವನು ನೆಲೆ
ಗೊಂಡ ನಿಂದೀಕೆಯಲಿ ಮುನ್ನಿನ
ದಂಡಿಯಲ್ಲಿದು ಹೊಸತೆನುತ ಕಳವಳಿಸುತಿಂತೆಂದ ೨

ಇಱಿದು ಕಳೆವೆನೆ ತಂಗಿ ಗರ್ಭಿಣಿ
ಹೊಱದು ನೆಲನೆನ್ನುವನು ಹೆಂಗುಸ
ನಿಱಿಯದಿರ್ದಡೆ ವಿಷ್ಣು ಬಹು ಮಾಯಾವಿ ಜನಿಸಿದರೆ
ಇಱಿಯಲಳವಟ್ಟಪನೊ ಮೇಣದ
ನಱಿಯ ಬಾರದೆನುತ್ತ ತಾನೇ
ಸೆಱೆವನೆಯಲಿದ್ದಂತೆ ಚಿಂತಾತುರತೆಯಿಂದಿರ್ದ ೩

ಜಾಗರದಲಿದ್ದಿರುಳು ಹಗಲುಂ
ಬಾಗ ಮೇಣುಡುವಾಗ ಪವಡಿಸು
ವಾಗ ನಿಂದಿರ್ದಾಗ ಮಿಗೆ ನಡೆವಾಗ ನುಡಿವಾಗ
ಯೋಗಿಗಳ ವೋಲೆಡೆವಱಿಯದಾ
ಭೋಗಿಶಯನನ ನೆನೆದು ಭಯದಲಿ
ಭೋಗಧೀಶನು ಜಗವತನ್ಮಯ ವಾಗಿರಲು ಕಂಡಾ ೪

ಇರಲಿರಲು ನವಮಾಸ ಗರ್ಭದ
ಲಿರಲು ಸಂದವು ಸರ್ವ ಲೋಕೇ
ಶ್ವರಗೆ ಪುಣಗ್ರಹನಿಕರ ಮಂಗಳ ಮಹೋತ್ಸವದಾ
ನಿರುಪಮ ಶ್ರಾವಣ ಬಹುಳ ಬಂ
ಧುರ ಗುಣಾಷ್ಟಮಿ ರೋಹಿಣಿಯಲವ
ತರಿಸಿದನು ಸುರನಿಕರ ಮಂಬರದೊಳಗೆ ನಲಿದಾಡೆ ೫

ಧರೆಯುಲಾಯ್ತುತ್ಸವ ಪರಂಪರೆ
ಪುರವರ ಗ್ರಾಮಾಶ್ರಮ ಕುಲ
ಗಿರಿ ನದೀಸಾಗರ ಸರೋವರ ದೀರ್ಘಿಕೆಗಳೊಳಗೆ
ಮೊರೆವ ತುಂಬಿಯು ಕೋಗಿಲೆಯು ಸು
ಸ್ವರದ ಗಿಳಿವಿಂಡುಗಳ ಹರುಷೋ
ತ್ಕರುಷ ಪೆಣ್ದೆನೆಗಳ ಸಮಗ್ರಶ್ರೀ ಸಮರ್ಧಿಸಿತು ೬

ಅರಳುಗಂಗಳ ಸುಪ್ರಸನ್ನಾಂ
ಬುರುಹ ವದನದಲಮಲ ದಂತಾಂ
ಕುರದ ದೀಪ್ತಿಯ ಪವಳವಿಡಿದರುಣಾಧರ ದ್ಯುತಿಯ
ವರ ಮುಕುಟಮಣಿಕಾಂತಿ ಪರಿಬಂ
ಧುರ ಗುಡಾಳಕ ನಿಚಯ ಸುಮನೋ
ಹರ ಚತುರ್ಭುಜ ಮೂರ್ತಿಯಲಿ ತೊಳತೊಳಗಿ ರಂಜಿಸಿದಾ ೭

ಕಂಗಳಲಿ ಸಾಕ್ಷಾತ ಮುರಹರ
ನಂಗಲಕ್ಷ್ಮಿಯ ನೀಕ್ಷಿಸುತ ಯದು
ಪುಂಗವನು ಮುಳುಗಿದನು ಪುಳಕಾಮೃತದಲಡಿಗಡಿಗೆ
ಹೊಂಗಿದುದು ತನು ತತ್ಪದಾಂಬುಜ
ಸಂಗ ಸುಖಸಾಮ್ರಾಜ್ಯ ಭೋಗದ
ಭಂಗ ಭಾವೋದ್ರೇಕ ಪರಮಾಹ್ಲಾದ ಭಾವದಲಿ ೮

ಹತ್ತು ಸಾವಿರ ಹಸುಗಳನು ವಿ
ಪ್ರೋತ್ತಮರಗೀ ನೆಱೆಯ ನಾನಿದ
ನುತ್ತರಿಸಿದಂದಿಂಗೆ ಕೊಡುವೆನೆನುತ್ತ ಮನದೊಳಗೆ
ದತ್ತವನೆ ಸಂಕಲ್ಪಿಸುತ್ತ ಯ
ದೂತ್ತಮನು ಸಾಷ್ಟಾಂಗದಲಿ ಪುರು
ಷೋತ್ತಮಂಗಭಿನಮಿಸಿ ಪುಳಕಿತನಾಗುತಿಂತೆಂದ ೯

ಖಳನಿಕರ ಹೆಚ್ಚಿದರೆ ಭಾರವ
ಕಳೆಯಲೆಂದೀ ಧರೆಗೆ ತನ್ನಯ
ನಿಳಯದಲಿ ವೈದೋಱಿದೈ ತನಗಿಂದು ಶಿಶುವಾಗಿ
ಭಳಿರೆ ಭಾಪುರೆ ಭಕ್ತ ಕರುಣಾ
ಜಲನಿಧಿಯೆ ನಿಜಭಕ್ತಜನ ವ
ತ್ಸಲನೆ ಭಕ್ತಾಧೀನ ವೃತ್ತಿಯೆ ಜಯ ನಮೋಯೆಂದ ೧೦

ಎನ್ನುದರದಲಿ ದೇವ ನೀನು
ತ್ಪನ್ನವಹುದನು ಕೇಳಿ ಕೊಂದನು
ಮುನ್ನವೇ ನಿನ್ನಗ್ರಜರನೀ ಕಂಸ ಕಡುಪಾಪಿ
ಇನ್ನಿದನು ಕೇಳಿದರೆ ಬಾರನೆ
ಕುನ್ನಿ ಕೊಲಲೀಕ್ಷಣವೆ ಯೆನುತ ಕೃ
ಪಾರ್ಣವಿನ ಪದಕೆಱಗಿ ಬಿನ್ನಹ ಮಾಡಿದನು ನಡುಗಿ ೧೧

ದೇವದೇವನ ಪದದಲಾ ವಸು
ದೇವ ತಲೆವಾಗಿರಲು ದೇವಕಿ
ದೇವಿ ಪರಮೇಶ್ವರನೆ ನಿಜಸುತನಾಗಿರಲು ಕಂಡು
ಭಾವರಸ ಪುಳಕ ಪ್ರಭಾವದ
ಲೋವೊ ತನುವನು ಮರೆದು ತದ್ಗತ
ಭಾವದಲಿ ತಲೆವಾಗಿ ಬಿನ್ನಹ ಮಾಡಿದಳು ತರಳೆ ೧೨

ಮೃತ್ಯು ಭಯ ಭಂಜನನೆ ಬಿನ್ನಹ
ಚಿತ್ತವಿಸುವುದು ತನ್ನ ಭಾಗದ
ಮೃತ್ಯುವೀ ಕಂಸಾಖ್ಯ ನತಿಶಯ ಪಾಪಚೇಷ್ಟಿತನು
ಮತ್ತೆ ಬಂಧುದ್ರೋಹಿ ರಕ್ಷಿಸು
ಪುತ್ರಶೋಕಾತುರೆಯ ನೆನ್ನನು
ಸತ್ಯಸಂಧನೆ ಸಕಲ ಜಗದಾತ್ಮಕನೆ ಚಿನುಮಯನೆ ೧೩

ನಂದಗೋಪನ ತರುಣಿ ಹೆತ್ತಿಹ
ಳೊಂದು ಶಿಶುಬಾಲೆಯನು ನೀ ತಹು
ದಿಂದು ನನ್ನುವನಲ್ಲಿರಿಸಿ ಮಾಯಾಸ್ವರೂಪೆಯನು
ಇಂದುಮುಖಿ ರೋಹಿಣಿಯುಲಗ್ರಜ
ನಂದು ಜನಿಸಿಹ ನಱತಿಹುದು ನೀ
ವೆಂದು ಜನನೀ ಜನಕರಿಗೆ ನೇಮಿಸಿದನಸುರಾರಿ ೧೪

ಎನುತ ನರಶಿಶುತನವನಾಂತನು
ದನುಜಹರ ನಾಕ್ಷಣದಲಾ ನಿಜ
ಜನಕ ಜನನಿಯುರೀಕ್ಷಿಸಲು ನಿಮಿಷಾರ್ಧ ಮಾತ್ರದಲಿ
ದನುಜನಱಿಯದವೋಲು ರಕ್ಷಿಸು
ವನುವದೆಂತೀ ಶಿಶುವನೆನುತಳಿ
ಮನದ ಭರದಿಂದೆತ್ತಿಕೊಂಡನು ನೋಡಿ ವಸುದೇವ ೧೫

ಕಾಲಲಿಕ್ಕಿದ ಬಿಗಿದ ಸಂಕಲೆ
ಬೀಳುಕೊಂಡುದು ಮುಱಿದು ತತ್ಪರ
ಪಾಲಕರು ನಿದ್ರೆಯಲಿ ಪರವಶರಾದರಾಕ್ಷಣಕೆ
ಸೀಳಿ ಸಡಲಿದ ತೋರಣದ ಹೇ
ರಾಳ ವಜ್ರಕವಾಟ ನಿಕರದ
ಲಾಳವಂಡಿಗೆಯಗುಳಿ ಸಂಕಲೆ ಕೀಲುಗಳು ಕಳೆಯೆ ೧೬

ಬಟ್ಟೆ ಸುಕರವದಾಯ್ತು ದೇವಕಿ
ನಿಟ್ಟಸುತ ಬೆರಗಾಗಲುದರ ದೊ
ಳಷ್ಟ ಸಿದ್ಧಿಗಳೊಡೆಯನನು ತಕ್ಕಯಿಸಿ ವಸುದೇವ
ಬಿಟ್ಟುಕೊಂಡನು ಮನೆಯ ದೆಸೆಯಿಂ
ದುಟ್ಟಧೋತ್ರದ ಸೆರಗನೇ ಮುಸು
ಕಿಟ್ಟು ಶಿಶುವಿಂ ಗೊಯ್ಯನೊಯ್ಯನೆ ಬಾಗಿಲನು ಕಳೆದಾ ೧೭

ಉಱುವ ದೈವವ ನುರದಲಾಂತಿದಿ
ರಱಿಯದಾ ವಸುದೇವ ಮನೆಯನು
ಹೊಱವಡುತ ಬರೆಮುಂದೆ ಮಾರ್ಗ ಮಹಾಂಧಕಾರದಲಿ
ಕಱಿವ ಮಳೆಯಲಿ ಕೆಸಱಿನಲಿ ಮು
ಕ್ಕುಱಿಸಿ ಮುಂಗುಡಿ ನೂಕದಿರಲದ
ನಱಿದನಂತನು ಬಂದನಾಕ್ಷಣವಾಳ್ದನಿದ್ದೆಡೆಗೆ ೧೮

ಹಾಸಿದನು ತನ್ನೊಡಲನವನಿಗೆ
ಭಾಸುರದ ಹೆಡೆವಣಿ ಸಹಸ್ರ ವಿ
ಳಾಸದಲಿ ಬೆಳಗಿದುವು ಹೆಡೆಗಳ ಕೊಡೆಯನಂಬರಕೆ
ಶೇಷ ನೆತ್ತಿದನೆನಲು ಮಹಿಮೆಯ
ದೇಸು ಘನವೋ ಸಕಲ ಲೋಕಾ
ಧೀಶ ವಿಷ್ಣುವನಾಂತು ನೃಪ ನಡೆತಂದ ನೊಲವಿನಲಿ ೧೯

ನಡೆತರಲು ಮುಂಮಾರ್ಗದಲಿ ಹೆ
ಗ್ಗಡಲವೊಲು ತೆರೆ ಮುಸಗಿ ಗಗನವ
ತುಡುಕುವುಲ್ಲೋಲಂಗಳಿಂದಿತ್ತಡಿಯನಾಕ್ರಮಿಸಿ
ಗಿಡಮರಂಗಳ ನಲೆವುತಿದಿರಲಿ
ಕಡು ಭಯಂಕರೆಯಾಗಿ ಮಿಗೆ ಭೋ
ರ್ಗಡೆದು ಯಮುನೆ ಮಹೋಗ್ರ ಮುಖದಲಿ ಹರಿವುತಿರೆ
ಕಂಡ ೨೦

ಮುಂದುಗಾಣದೆ ಯದುವರನು ಗೋ
ವಿಂದನನು ತಕ್ಕೈಸಿಕೊಂಡಾ
ನಂದದಲಿ ವ್ಯೆಮಱಿದು ಹೋಗುತಿರೆ ಕಂಡು ಭಯದಿಂದಾ
ನಿಂದಳಿದ್ದೆಸೆಗಬುಧಿ ಮಾರ್ಗವ
ನಂದು ರಘುಪತಿಗಿತ್ತವೋಲ ರ
ವಿಂದ ಸಖಸುತೆ ತೆಗೆದುಬಿಟ್ಟಳು ಯದುಪತಿಗೆ ಪಥವಾ ೨೧

ಉತ್ತರಿಸಿ ಯಮುನೆಯನು ಹರಿಯನು
ಹೊತ್ತುಕೊಂಡುರದೊಳಗೆ ಹೋಗಿ ಯ
ದೂತ್ತಮನು ನಟ್ಟಿರುಳು ಹೊಕ್ಕನು ನಂದಗೋಕುಲವ
ಚಿತ್ತಸಾಕ್ಷಿಯನಿರಿಸಿ ಮಾಯೆಯ
ನೆತ್ತಿಕೊಂಡನು ನಂದಗೋಪಿಯ
ಪುತ್ರಿಯನು ಮರಳಿದನು ಮಥುರಾಪುರಕೆ ವಸುದೇವ ೨೨

ತೊಱಿಸುದುಸ್ತರವಾಯ್ತುಕೆತ್ತವು
ತೆಱೆದ ಬಾಗಿಲು ಕಾಲಸಂಕಲೆ
ಮಱಳಿ ತಾಬಲು ಬೆಸುಗೆವಡೆದುದು ಕೂಡೆ ಕೆಲಬಲದ
ಮಱೆದೊಱಗಿದವರೆದ್ದರಂದಾ
ಸೆಱೆಯ ಕಾಪಿನ ಭಟರು ಕಂಗಳ
ನಿಱುಕಿ ಬಿಗಿದುದು ಕಾಳಗತ್ತಲೆ ನಿಮಿಷಮಾತ್ರದಲಿ ೨೩

ಹಱಿದು ಕಾಪಿನ ದೂತರೈದಿದ
ರರಸನೆಡೆಗಾ ದೇವಕಿಯ ಶಿಶು
ವೊಱಲುವಾ ದನಿಗೇಳಿ ಭಯದಲಿ ನಡುಗಿನಡುವಿರಳು
ದುರುಳನದ ನಾಲಿಸುತ ನಿದ್ರೆಯ
ಭರದಲಾವೆಡೆ ತನ್ನ ಗಂಟಲ
ಮುಱಿವ ಮೃತ್ಯುವೆನುತ್ತ ಬಂದನು ಬಿಟ್ಟ ಮಂಡೆಯಲಿ ೨೪

ಎಡಹುತೇಳುತ ಬೀಳುತಡಿಗಡಿ
ಗೊಡಲುಕಂಪಿಸಿ ಶೋಕ ಭಯದು
ಗ್ಗಡದ ಕಾತರಭಾವದಲಿ ಕಂಗೆಟ್ಟು ಕಳವಳಿಸಿ
ಜಡಿದು ಜವನಂದದಲಿ ಖಳ ಧರೆ
ನಡುಗುವಂತೈತರಲು ದೇವಕಿ
ಹಿಡಿದಳಣ್ಣನಕಾಲ ಕರುಣವ ತೋರಿ ಭಯದಿಂದ ೨೫

ಅಣ್ಣ ಕೊಲ್ಲದಿರಕಟ ಕಡೆಯುಲಿ
ಹೆಣ್ಣು ಜನಿಸಿವೆಯೆನಗಭಾಗ್ಯೆಗೆ
ಪುಣ್ಯವಂತನೆ ಮುನಿಯುಲೇತಕೆ ಸೊಸೆಯುಲಾ ನಿನಗೆ
ಮಣ್ಣು ಕೂಡಿದವಾರು ಮಕ್ಕಳು
ಬಣ್ಣಿಪೆನು ತಾನೇನನೆನುತವೆ
ಕಣ್ಣನೀರಲಿ ಕರಗಿ ಕಾಲ್ವಿಡಿದಿರ್ದ್ದಳಬುಜಾಕ್ಷಿ ೨೬

ಇಂತೆನುತ ತಕ್ಕಯಿಸಿ ಮಗಳನು
ಕಾಂತೆದೇವಕಿ ಕಂಬನಿಗಳುಗು
ವಂತೆ ಕಾರ್ಪಣ್ಯವನು ತೋಱಿಯುಳುತ್ತ ಬಿದ್ದಿರಲು
ಸಂತವಿರು ಸಾಕೆಂದು ತಂಗಿಯ
ನಂತಕನ ವೋಲೊದೆದು ಕಾಳುರಿ
ಯಂತೆ ಕಣ್ಣುರಿ ಸೂಸಿ ಕೊಂಡನು ನೆಳೆದು ಬಾಲಕಿಯ ೨೭

ಎರಡುಕಾಲನು ಹಿಡಿದು ಜಡಿದಂ
ಬರಕೆ ತೆಗೆದಪ್ಪಳಿಸಿ ಶಿಲೆಯುಲಿ
ಶಿರವ ನೊದೆದೆಲೆ ಹಾಹೆ ಹೋಗೆನಲಭ್ರಮಾರ್ಗದಲಿ
ಸುರರು ಜಯುಜಯುಯೆನಲು ನಿಂದಳು
ವರಗದಾಂಬುಜ ಚಾಪಚಕ್ರ
ಸ್ಫುರಿತೆ ಶರಪಾಶಾಂಕುಶಂಗಳಲಷ್ಟಭುಜೆಯಾಗಿ ೨೮

ಎಲವೆಲವೊ ಖಳ ಕೇಳುತನ್ನನು
ಮುಳಿದು ನೀ ಕೊಲುವವನೆ ಗಂಟಲೊ
ಳಿಳಿವತುತ್ತೇ ನಿನಗೆ ನಾನೆಲೆಪಾಪಿ ನಿನ್ನಸುವ
ಕಳೆವ ಕಾಲಾತ್ಮಕನು ಧರೆಯುಲಿ
ಬೆಳೆವುತೈದನೆ ಬೇಗ ನಿನ್ನೀ
ತಲೆಯುಮುಱಿಯಿಸಿಕೊಳ್ಳೆನುತ್ತಡಗಿದಳು ಗಗನದಲಿ ೨೯

ಚಂಡಿಕೆಯು ನುಡಿಕೇಳುತಲೆ ಖಳ
ಮಂಡೆಯನುಹೊಡೆದಂತೆ ನೊಂದನು
ಭಂಡಮಾಡಿತೆ ದೈವವೆಮ್ಮನು ಬಯಲಮಾತಿನಲಿ
ದಂಡಿಸಿದೆನಕಟಕಟ ತಂಗಿಯ
ಗಂಡನನು ತಂಗಿಯನು ಮಕ್ಕಳ
ತಂಡವನು ತಾ ಬಱಿದೆ ಕೊಂದೆನೆನುತ್ತ ಚಿಂತಿಸಿದ ೩೦

ಏನೆನಾನಿದಕೆನುತ ಬಂದಾ
ದೇವರಿಪು ಕಾಲ್ವಿಡಿದು ವರವಸು
ದೇವ ದೇವಕಿಯರನು ನುಡಿದನು ಸಂಕಲೆಯಕಡಿದು
ದೇವತಾಂಶಿಗಳಲ್ಲದಿರ್ದಡೆ
ನೀವದೆಂತೌ ಹೆತ್ತಮಕ್ಕಳ
ನೀವಿರೆನಗತಿಪಾಪಕರ್ಮಂಗೆಂದು ಬಿಸುಸುಯ್ದ ೩೧

ಪಾಪಿನಾನೆಲೆತಾಯೆ ಸೋದರ
ರೂಪಿನಂತಕನಕಟ ಬಿಡುಬಿಡು
ಕೋಪವನು ಮೂಢಂಗನುಗ್ರಹಿಸುವುದು ನೀನೆನುತ
ಭೂಪನಡಿಗಡಿಗಿಂತು ಪಶ್ಚಾ
ತ್ತಾಪವನು ಮಾಡುತ್ತಕಾಲ್ವಿಡಿ
ದೀಪರಿಯಲನುಶೋಕಿಸಲು ವಸುದೇವನಿಂತೆಂದ ೩೨

ತಾತ ದೈವಾಧೀನವೀ ಜನ
ಜಾತ ಸುಖದುಃಖಾನುಭವಗಳಿ
ಗಾತುರಿಸಲೇಕಾವುದೈ ತಪ್ಪೀ ಚರಾಚರದ
ಭೂತನಿಕರದಚೇಷ್ಟೆಗೊಬ್ಬನೆ
ಹೇತುಸೂತ್ರಿಗನುಳಿಯೆ ಹಾಹೆಗ
ಳೀತಱಿಂದವೆ ಚೇಷ್ಟೆವಡೆವುವು ತಂದೆ ಹೇಳೆಂದ ೩೩

ಬೀಳುಕೊಂಡಾ ಕಂಸನೈತಂ
ದಾಲಯಕೆ ಕರೆಸಿದನು ತನ್ನಯ
ಖೂಳಮಂತ್ರಿಪ್ರಕರವನು ಚಂಡಿಕೆಯನುಡಿಗೇಳಿ
ಓಲಗದಲಿಂತೆಂದನೆಲ್ಲರು
ಕೇಳಿರೈ ಹೋದಿರುಳ ಮಾಯಾ
ಬಾಲಕಿಯಮಾತುಗಳನೆಂದನು ಕಂಸನನಿಬರಿಗೆ ೩೪

ಚಿಗಿದು ಕೈಯಿಂದಂಬರಾಗ್ರ
ಕ್ಕೊಗೆದು ಹೇಳಿದಳೆನಗೆ ತಂಗಿಯು
ಮಗಳು ಧರೆಯಲಿ ಕೇಳು ಹುಟ್ಟಿದನಂತಕನು ನಿನಗೆ
ಬಗೆಯದೆನ್ನನು ಬಱಿದೆ ಕೊಂದಪೆ
ಹಗೆಯೆ ನಾ ನಿನಗೆನುತ ಸುರರೋ
ಲಗಕೆ ಸರಿದಳು ಕರುಣವುಳ್ಳವಳೆಂದನಾ ಕಂಸ ೩೫

ಎನಲು ನುಡಿದರು ಜೀಯ ನಿಮ್ಮಡಿ
ಗನಿಮಿಷರು ಕುಹಕಿಗಳು ಕೇಡನು
ನೆನೆಯದಿರ ರಾರಱಿಯರಿದ ದುರ್ಮಂತ್ರ ಕೋವಿದರು
ಅನುವರದ ಹಂದೆಗಳು ಕೊಡುನ
ಮ್ಮನಿಬರೊಳು ವೀಳೆಯವನೊಬ್ಬಂ
ಗನಿಮಿಷರ ಕುಲನಾಶನಕೆ ನೋಡೆಂದರತಿಬಲರು ೩೬

ಅರುಮುನಿದೇಗುವರು ನಿಜಗೃಹ
ಶೂರರಮರರು ಕಾದುವರೆ ದೈ
ತ್ಯಾರಿಯಾದರಗೋಚರನು ಮನೆ ಕಡಲ ಮಧ್ಯದಲಿ
ಮಾರರಿಪು ಮರುಳೊಡೆಯನಾಕಾಂ
ತಾರವನು ಹೊಕ್ಕಿಹನಹಿಂಸಾ
ಚಾರವಬುಜಭವಂಗೆ ಕಾಳೆಗವಾರೊಡನೆ ನಮಗೆ ೩೭

ಏಳಿ ದಿಟವಹಿತರಲಿ ಪೃಥ್ವೀ
ಪಾಲನೀತಿಯಿದಲ್ಲ ಮೂಲೋ
ನ್ಮೂಲನವ ಮಾಡುವುದು ದುರ್ಬಲರಾದಡೆಯು ಸುರರಾ
ಸಾಲವನು ಶತ್ರುವನು ವಹ್ನಿ
ಜ್ವಾಲೆಯನು ರೋಗವನು ತತ್ತ
ತ್ಕಾಲದಲಿ ಕಡಿಗಳೆಯದಿದ್ದರೆ ಬಳಿಕಸಾಧ್ಯವಲಾ ೩೮

ಮೂಲವಮರರಿಗೆಲ್ಲ ವಿಷ್ಣುವೆ
ಮೂಲವಾ ವಿಷ್ಣುವಿಗೆ ವಿಪ್ರರು
ಮೂಲವವರಿಗೆ ವೇದಧರ್ಮ ತಪೋವ್ರತಾದಿಗಳು
ಮೂಲವಿನಿತಕ್ಕೆಲ್ಲ ಗೋವಿ
ಪ್ರಾಳಿಯದಱಿಂದಲ್ಲಿಗಲ್ಲಿಗೆ
ಶೀಲವಂತರನಾಯ್ದುಕೊಲುವುದು ಮಂತ್ರರಿಪುವಧೆಗೆ ೩೯

ತ್ರಿದಶಕುಲವನು ನಮಗೆ ಕೊಲಲಿ
ಕ್ಕಿದುವೆ ಮುಖ್ಯೋಪಾಯ ವಿಪ್ರರ
ಸದೆದುಕೊಲುವುದು ಬೇಱಿನೋಡುವಡಿದುವೆ ನೃಪನೀತಿ
ಬದುಕಲಱಿಯನು ವಿಷ್ಣು ಕೆಡನೇ
ಪದುಮಭವನಾ ರುದ್ರನುಳಿವನೆ
ಮೊದಲಕಡಿದರೆ ಶಾಖೆಗಳು ಜೀವಿಸುವುವೆ ಬಳಿಕ ೪೦

ಎನಲಿದೇ ಲೇಸೆನ್ನ ಮನದಲಿ
ನೆನೆದುದನೆ ಹೇಳಿದಿರಿ ನೀವೆನು
ತನಿಬರನು ಕಳುಹಿದನು ಕದನಪ್ರಿಯರನೊಲವಿನಲಿ
ದನುಜನಾ ಗೋವಿಪ್ರವರವಧೆ
ತನಗೆ ಹಿತವೆಂದೇನಿರಂತರ
ನೆನೆವುತಿರ್ದನು ಮೃತ್ಯುಪಾಶಪರೀತನೆಂದೆನಿಸಿ ೪೧

ಅಸುರನಿಂತಾ ದೈತ್ಯ ಭಟರನು
ಬೆಸಸಿ ರಾಜಾಲಯುವ ಹೊಗಲಾ
ವಿಷಮುಮತಿಗಳು ಕಾಲಪಾಶಾವೃತರು ಹರಿಹರಿದು
ವಸುಧೆಯುಲಿ ಖಳರಲ್ಲಿಗಲ್ಲಿಗೆ
ಶಿಶುಪಶುದ್ವಿಜಹತ್ಯೆಯನು ಸಾ
ಧಿಸುತಲಿರ್ದರು ಪುಣ್ಯಗಿರಿವನರಾಷ್ಟ್ರಪುರಗಳಲಿ ೪೨

---

೪

## ನಂದಗೋಕುಲ

ಅರಸ ಕೇಳೈ ನಂದಗೋಪನ
ಪರಮ ಪುಣ್ಯೋದಯುವನಾ ಶ್ರುತಿ
ಶಿರಕೆ ದುರ್ಗಮುವಾವನಂಘ್ರಿದ್ವಯುದ ಸಂಸ್ಥಾನ
ವರಮುನಿಗಳೋರಂತೆ ಮನವನು
ಬೆಱಸಲಱಿಯುರು ಶಿವಶಿವಾ ಗೋ
ಚರಿಸಿದನಲಾ ತಾನೆ ಸಾಕ್ಷಾದ್ವಿಷ್ಣು ಶಿಶುವಾಗಿ ೧

ಕಂದನಾದನು ತನಗೆನುತ್ತಾ
ನಂದಗೋಪನು ಮುಳುಗಿ ಪರಮಾ
ನಂದರಸಪುಳಕದಲಿ ಕರೆಸಿದನಿರುಳು ಜೋಯಿಸರ
ಮಿಂದು ಮಡಿಗಳನುಟ್ಟು ಪರಿಜನ
ವೃಂದಸಹಿತುತ್ಸವದ ಸಂಭ್ರಮ
ದಿಂದ ವಿಪ್ರೋತ್ತಮರನಾರಾಧಿಸಿದನುಚಿತದಲಿ ೨

ಬಂದರಾ ಗೋವಳರುನೆರೆದಾ
ನಂದಗೋಪನ ಮನೆಗೆ ಪರವಾ
ನಂದದಲಿ ಕರನಿಹಿತ ನಾನೋಪಾಯನಂಗಳಲಿ
ಮಿಂದು ಮಡಿಗಳನುಟ್ಟುಕೊಳುತೊಲ
ವಿಂದ ಸರ್ವಾಭರಣನಿಕರದ
ಲಂದವಡೆದೈತಂದು ಕಂಡರು ಕಮಲಲೋಚನನ ೩

ಕೇಳಿದಾಗಳೆ ಗೋಪಿಯರು ಹೊ
ನ್ನೋಲೆ ಕಡಗಂಗಳನು ತೊಟ್ಟುವಿ
ಶಾಲ ದಿವ್ಯಾಂಬರಗಳನು ಸಿಡಿದುಟ್ಟು ನಲವಿನಲಿ
ಕಾಲನೂಪುರ ದಿಗು ಝಣತ್ಕೃತಿ
ಜಾಲದಲಿ ರಂಜಿಸಲು ಮುಡಿಹೂ
ಮಾಲೆಸೂಸಲು ಬಂದರಾ ನಂದಾಲಯಕೆ ನಲಿದು ೪

ಹರಸಿ ನೇಸೆಯ ತಳಿದರಂದಾ
ಸಿರಿಯುರಸನಂಗದಲಿ ನಮ್ಮೆ
ಲ್ಲರನು ರಕ್ಷಿಸುವಾಳ್ದನಾಗೆಲೆತಂಡೆ ನೀನೆನುತ
ನೆರವಿಯಲಿ ಹೊಯಿದಾಡಿದರು ಕದ
ಡರಿಸಿನದಕುಂಕುಮದ ರಸಬಂ
ಧುರದ ನವನೀತಂಗಳಿಂದಂಗನೆಯರೋಕುಳಿಯ ೫

ಬಂದಳತಿ ಹರುಷದಲಿ ರೋಹಿಣಿ
ಕಂದನೊಡನುತ್ಸವದ ಸಂತಸ
ದಿಂದ ದಿವ್ಯಾಂಬರ ವಿಭೂಷಣ ಗಂಧಮಾಲ್ಯದಲಿ
ಸಂದಣಿಯಲೊಪ್ಪಿದುದು ಗೋಕುಲ
ವಂದುಮೊದಲುತ್ಸವದ ಪರಂಪರೆ
ಯಿಂದೆಸೆದುದಖಿಳೇಶ್ವರನ ಸನ್ನಿಧಿಯ ದೆಸೆಯಿಂದ ೬

ಒಂದು ದಿನ ಗೋಕುಲದರಕ್ಷೆಗೆ
ಮಂದಿಯನು ಪರುಠವಿಸಿ ನಿಲಿಸುತ
ನಂದಗೋಪನು ಹಾಲುಬೆಣ್ಣೆ ಮೊಸರ್ಗಳನು ಕೊಂಡು
ಬಂದನಾ ಮಧುರಾಪುರಿಗೆ ನಡೆ
ತಂದು ಕಂಸಂಗೆಲ್ಲವನು ನಲ
ವಿಂದ ಕೊಟ್ಟನು ನೃಪತಿಗಂದಾ ವರುಷವರ್ತನೆಯು ೭

ಅದನಱಿದು ವಸುದೇವನಾತನ
ವದನವನು ಕಾಂಬರ್ತಿಯಲಿ ಮನ
ದುದಿತ ಸಂತೋಷದಲಿ ಬಂದನು ನಂದನಿದ್ದೆಡೆಗೆ
ಮುದದಲಂದೊಡಹುಟ್ಟಿದನ ದೂ
ರದಲ್ಲಿಕಾಣುತ ಬೇಗದಿಂದೆ
ದ್ದಿದಿರುಗೊಂಡಪ್ಪಿದನು ನಯನಾನಂದಬಾಷ್ಪದಲಿ ೮

ಹೊಂದಿದನು ಬಂದಂತೆ ತವ್ಮೊಳ
ಗಂದು ಸಂಪ್ರೀತಿಯಲಿ ಕುಳ್ಳಿ
ರ್ದಂದನಾ ವಸುದೇವನಾ ನಂದಂಗೆ ಮನದೊಳಗೆ
ನಂದನನ ನೆನೆವುತ್ತ ಕುಶಲವೆ
ತಂದೆ ನಿನಗೆ ಸಮಸ್ತ ಬಾಂಧವ
ವೃಂದ ಗೋಧನಗಳಿಗೆ ಸುಖವೈ ಸಕಲಪರಿಜನಕೆ ೯

ಲೇಸುಸೀ ಮುಪ್ಪಿನಲಿ ಮಗನನ
ದೇಸು ಕೃತಿಯೋ ಪಡೆದೆ ಘನ ಪರಿ
ತೋಷವಾಯ್ತೆಲೆ ತಂದೆ ತನಗದ ಕೇಳಿ ಮನದೊಳಗೆ
ಬೇಸಱಿನ ಭವದುಃಖಘನವಾ
ರಾಸಿಯನು ನೆಱೆ ಪುತ್ರಪೌತ್ರದ
ಲೀಸುವೆಯಲ್ಲೈ ಗೃಹದ ಭಾರವನಿರಿಸಿ ಕೇಳೆಂದ ೧೦

ತನ್ನನಿಲ್ಲಿಯೆಕಂಡೆ ವರುಷದ
ಹೊನ್ನನರಸಂಗಿತ್ತೆ ನಿಲ್ಲದಿ
ರಿನ್ನು ನೀನಿದರೊಳಗೆ ಹೋಗೆಲೆ ನಂದ ಗೋಕುಲಕೆ
ಮನ್ನಿಸುವಡುತ್ಪಾತಶತ ವು
ತ್ಪನ್ನವಹುದಾ ಗೋಕುಲದಲಿದು
ತನ್ನ ಮಾತೆನಬೇಡ ಸುವಿಧಾನವನು ಮಾಡೆಂದ ೧೧

ಎಂದುಕಳುಹಿಸಿಕೊಂಡುತನ್ನಯ
ಮಂದಿರಕೆ ವಸುದೇವನೈದಲು
ನಂದನಿತ್ತಲು ಕೇಳ್ದುವಸುದೇವನ ತದುಕ್ತಿಗಳಾ
ನೊಂದು ಶಂಕಿಸಿ ಚಿತ್ತದೊಳಗೆ ಮು
ಕುಂದನನು ಮುಚ್ಚಿಹೊಕ್ಕು ಮರಳಿದು
ಬಂದನಾ ಮುಮ್ಮಾರ್ಗದಿಂದ ನಿಜಾಲಯಕ್ಕೊಲಿದು ೧೨

ಅತ್ತಲನ್ನಿಗ ಧರೆಯ ಶಿಶುಗಳ
ನೊತ್ತರಿಸಿ ಮೋದುತ್ತ ಬಂದಳು
ಮೃತ್ಯುವನು ಕರೆವಂತೆ ಪೂತನಿ ನಂದಗೋಕುಲಕೆ
ಹೆತ್ತತಾಯಂದದಲಿ ವೇಷವ
ಹೊತ್ತು ಘೋರಾಕಾರವನು ಮುಚ್ಚಿ
ಸುತ್ತ ಮಾಯಾವಿದೆ ಮುನಿಪ್ರಿಯಮೂರ್ತಿಯಿದ್ದೆಡೆಗೆ ೧೩

ನೋಡಿಕಂಡಳು ಮನೆಯ ಮುಂದಣ
ಮಾಡದಲಿ ಅರೆಗುಳಿಯ ಕುಜುಹನು
ದಾಡೆಯಿಲ್ಲದ ದುಷ್ಟೆ ಹೊಕ್ಕಳು ನಂದನಾಲಯವ
ಮಾಡಹೋಗಿರೆ ತಾಯಿ ಕೆಲಸವ
ನೂಡಿಕೊಲುವೆನು ವಿಷವನೆನುತವೆ
ದೂಡಿದೊರೆಯ ಕಠಾರಿಯಂತೆ ಕಠೋರಭಾವದಲಿ ೧೪

ಗರುಡದೇವನನೆಬ್ಬಿಸಲು ಬಂ
ದುರಗವಧುವೋ ಹುತ್ತಿನೊಳಗಿ
ರ್ದುರಗನನು ಹೊಕ್ಕವುಕಿ ಕೊಲಬಂದಾಯು ನೆರೆದಿಲಿಯೋ
ದುರುಳೆ ಬಂದಳು ದುಷ್ಟರಾಕ್ಷಸಿ
ಮರಣಕಾರಿ ಕೃತಾಂತನಿದ್ದೆಡೆ
ಗಱಿಸಿಕೊಳಲೇಕೆನುತ ಮಿಗೆ ಮೋಕ್ಷವನು ಪಡೆವಂತೆ ೧೫

ಎತ್ತಿಕೊಂಡಳು ಹಾವನೇಣಂ
ದೆತ್ತಿಕೊಂಬಂದದಲಿ ಖಳಕುಲ
ಮೃತ್ಯುವನು ಮಾಯಾಮನುಷ್ಯಾಕೃತಿಯ ಮುರಹರನ
ಇತ್ತುಕೊಲುವೆನು ವಿಷವನೊಂದೇ
ತುತ್ತುಗೊಂಬೆನೊಯೆನುತ ತನ್ನಯ
ಚಿತ್ತದಲಿ ನಿಶ್ಚಯಿಸುತಿತ್ತಳು ಮೊಲೆಯನರ್ಭಕಗೆ ೧೬

ಅಱಿಯದವನವೊಲಖಿಳ ಸಚರಾ
ಚರ ಜಗವ್ಯಾಪಕನು ಕಂಗಳ
ತೆಱೆಯ ದಱಿವಿನಕಣೆ ಕಟಾಕ್ಷಿಸಿ ಕಾಣದವನಂತೆ
ಮುಱಿವೆನೀಕೆಯ ಗೋಣನವನಿಯ
ಹೊಱೆಯ ಕಳೆವವ್ರತಕೆ ಮೊದಲೆನು
ತಱಿತು ಸುಮ್ಮನೆ ಮಿಡುಕದಿರ್ದನು ರಾಕ್ಷಸಿಯಮುಂದೆ ೧೭

ದಿಟ್ಟಿಸಿದರೆವೆಸೀವ ವಿಷವನು
ದುಷ್ಟೆ ಮೊಲೆಯಲಿಹೂಸಿ ಶಿಶುವಿಗೆ
ಕೊಟ್ಟಳವಿನಾಶಿಗೆ ಕೃತಾಂತ ಕೃತಾಂತವಿಗ್ರಹಗೆ
ಮೆಟ್ಟಿ ಖಳೆಯಂಗವನು ಹೃ
ದ್ವಿಷ್ಟರಾರ್ಚಿತ ಚರಣ ನಸುರೆಯ
ಕೊಟ್ಟಮೊಲೆಗಳನೆರಡು ಕೈಯಲಿ ಹಿಡಿದು ಬಿಡದುಂಡ ೧೮

ಭಾವಶುದ್ಧಿಯುಳೆನಗೆ ಪೂಜೆಯು
ನೀವ ಸತ್ಪುರುಷರಿಗೆ ಮುಕುತಿಯು
ನೀವುದೇನಚ್ಚರಿಯೆ ನೆಱೆ ನಂಜೂಡಿ ಕೊಲಬಂದ
ಭಾವದುಷ್ಟೆಗೆ ಹಿತದಮುಕುತಿಯು
ನೀವನೆಂಬುದ ನೞುಹುವಂತಿರೆ
ಜೀವಸಹಿತಿಕ್ಕೈಯುಲುಂಡನು ಮೊಲೆಯನುಱೆಹಿಡಿದು ೧೯

ಘೀಳಿಡುತ ಬಸವಳಿದು ತನ್ನಯ
ತೋಳುಗಳನೊಂದೆನೆಗೆ ಹರಹುತ
ಕಾಲುಗಳನೊಂದೆನೆಗೆ ಬೀಸಾಡುತ್ತ ಧರಣಿಯುಲಿ
ಶೈಲರಾಜನವೋಲು ಸಹಜ ಕ
ರಾಳರೂಪವನಾಂತು ಕೆಡೆದಳು
ಕಾಳರಕ್ಕಸಿ ಭುವನ ಬೆದಱಲು ಬಿಟ್ಟ ಮಂಡೆಯುಲಿ ೨೦

ಎಸೆವ ಗಿರಿಕಂದರ ಸಿಭೋಗ್ರ
ಶ್ವಸನರಂಧ್ರದ ಬಿಗಿದಹುಬ್ಬಿನ
ಬಸುಱಬತ್ತಿದ ಕೋರದಾಡೆಯು ರಕ್ಕಸಿಯುಕಂಡು
ಅಸುರೆಯುುರದಲಿ ಮೊಲೆವಿಡಿದು ಲಂ
ಬಿಸುವ ಶಿಶುವನುಕಾಣುತವೆ ಕೂ
ರಸಿಯೊಡಲಲುಡಿದಂತೆ ಹರಿತಂದುದು ಜನಸ್ತೋಮ ೨೧

ಎತ್ತಿಕೊಂಡರು ಶಿಶುವನೇವೆ ವೆ
ನುತ್ತಚಿಂತಿಸಿ ಕಾಲಕರ್ಮವ
ದೆತ್ತಲೇನೆಂದಱಿಯದಾ ಸಾಕ್ಷಾತ್ ಸ್ವಯಂಧೃಶಿಯು
ಇತ್ತರಾ ಜನನಿಗೆ ಜಗಂಗಳ
ಹೆತ್ತವನ ಹೆತ್ತವನ ತನ್ನಯು
ಪುತ್ರನೆಂದಳಲಿದಳು ನಂದನಕಾಂತೆ ಮಱುಕೊಳಿಸಿ ೨೨

ಇಂದುಮುಖಿಯರು ನೆರೆದು ಗೋರಜ
ದಿಂದ ಗೋಮೂತ್ರಾಭಿಷೇಕದ
ಲಂದು ಬಳಿದೀಡಾಡಿ ಗೋಪುಚ್ಛಾದಿಕಂಗಳನು
ನಂದನಂಗನೆ ರೋಹಿಣಿಯರೊಡ
ನಿಂದಿರಾಪತಿಗಖಿಳ ಭುವನಾ
ನಂದಕಾರಣ ಮೂರ್ತಿಗೆಸಗಿದರಂದು ರಕ್ಷೆಗಳ ೨೩

ಮುಂದಿರಲಿಹರಿಚಕ್ರ ವೀತನ
ಹಿಂದೆಗದೆ ರಕ್ಷಿಸುಗೆ ಪಾರ್ಶ್ವ
ದ್ವಂದ್ವದಲಿ ರಕ್ಷಿಸುಗೆ ನಂದಕ ಶಾರ್ಙ್ಗವೆಂಬೆರಡು
ಸಂದ ದಿವ್ಯಾಯುಧಗಳೀ ಕುಲ
ನಂದನನ ನವನಿಯಲಿ ವಿನತಾ
ನಂದನನು ರಕ್ಷಿಸುಗುವೇಂದ್ರರು ಶಿಶುವನಭ್ರದಲಿ ೨೪

ಇಂತು ಗೋಪಿಯರೊಸೆದು ನಂದನ
ಕಾಂತೆ ಸಹಿತುತ್ಸವದಲಾ ಗ್ರಹ
ಶಾಂತಿಯನು ನೆಱಿಮಾಡಿ ಸಂತತ ಶಾಂತವಿಗ್ರಹಗೆ
ಸಂತಸಂಬಡುತಿರ್ದರಾಶುಭ
ಚಿಂತೆಯನು ನೆಱಿ ಮೆಱಿದು ಲಕ್ಷ್ಮೀ
ಕಾಂತನಿತ್ಯಾತುಮನ ಶಿಶುಲೀಲೆಗಳನೀಕ್ಷಿಸುತ ೨೫

ಅರಸಕೇಳಡೆಗೆಡೆದ ಪೂತನಿ
ಯುರು ಭಯಂಕರರೂಪ ಕಂಡ
ಚ್ಚರಿವಡುತ ಗೋಕುಲದಜನ ತಮುತಮುಗೆ ಬೆಱಗಾಗಿ
ನೆರೆದು ನೋಡುತ್ತಿರಲು ಮಧುರಾ
ಪುರದ ದೆಸೆಯಿಂದಖಿಳ ಪರಿಜನ
ವೆರಸಿ ಬಂದನು ನಂದಗೋಪನು ತಡೆಯದಾಕ್ಷಣಕೆ ೨೬

ಬಂದು ಕಂಡನು ಕೆಡೆದ ಪೂತನಿ
ಯಂದವ ನಿದೇನೆನುತ ನಡುಗುತ
ನಂದಗೋಪಾದಿಗಳು ಹದನನು ಕೇಳಿ ತಲ್ಲಣಿಸಿ
ಹೊಂದಿದವನಿವನೆನ್ನ ಭಾಗ್ಯಕೆ
ಕಂದನೇ ಶಿವಯೆನುತ ಪರಮಾ
ನಂದಮೂರ್ತಿಯ ನೋಡಿ ಕಂಬನಿದುಂಬಿದನು ನಂದ ೨೭

ದೇವನೋ ಋಷಿಯೋ ಅನಾಗತ
ಕೋವಿದನೊ ನರನಲ್ಲ ದಿಟ ವಸು
ದೇವನಕಟಾ ಹೇಳಿದಾನುಡಿ ಸತ್ಯವಾದುದಲಾ
ಆವಯೋಗಿಗಳಱಿವರಿದನೀ
ಭಾವಿಕರ್ಮದಗತಿಯನೆನುತಾ ಜ
ನಾವಳಿಯಲಾ ಘೋಷಿಸಿದನಾ ನಂದನಡಿಗಡಿಗೆ ೨೮

ಇತ್ತಲನ್ನೆಗಕಂಸಭೃತ್ಯರೊ
ಳುತ್ತಮ ತೃಣಾವರ್ತನೆಂಬಾ
ದೈತ್ಯನಾವರಿಸುತ್ತ ಕೆಂದೂಳಿಯಲಿ ಗೋಕುಲವ
ಕಿತ್ತುಮರಗಿಡಬಳ್ಳಿಗಳನಲೆ
ವುತ್ತ ವಾತಾಕೃತಿಯಲೈತಂ
ದೆತ್ತಿಕೊಂಡಂಬರಕೆಹಾಯ್ದನು ಖಳಕುಲಾಂತಕನ ೨೯

ಹಗಲುಕತ್ತಲೆಕವಿದು ದಶದಿ
ಕ್ಕುಗಳನವನಿಯನಂಬರವ ನೊ
ಮ್ಮುಗದಲಾವರಿಸುತ್ತ ಕೆಡೆಬೀಸುತ್ತಬಿಱುಗಾಳಿ
ಒಗುಮಿಗೆಯಕೆಂದೂಳಿ ಕೆತ್ತುದು
ಜಗದ ಕಂಗಳಪಥವನೊಬ್ಬನೆ
ಮಗನದೇನಾದನೊಯೆನುತ್ತ ಯಶೋದೆ ತಲ್ಲಣಿಸಿ ೩೦

ಬಂದುಕಾಣದೆ ಶಿಶುವನೇಗುದಿವೆ
ನೆಂದಜಿಸಿ ಮುನ್ನಿರಿಸಿದೆಡೆಯಲಿ
ಬೆಂದವೊಲು ಬಸವಳಿದಳುತ್ತಳಲುತ್ತ ಧರಣಿಯಲಿ
ಇಂದುಮುಖಿ ಹೊರಳಿದಳು ಕಾಣದೆ
ಕಂದಿ ಕಜಿುವನು ತಾಯವೋಲರ
ವಿಂದನಾಭನನಬಲೆ ಹಂಬಲಿಸುತ್ತ ದೆನೆದೆನೆಗೆ ೩೧

ಕಾಂತೆ ಮೂರ್ಛೆಯೊಳೆಚ್ಚಜಿಂ ದೇ
ಕಾಂತ ಭಕ್ತರವೋಲು ಲಕ್ಷ್ಮೀ
ಕಾಂತನನು ಹಂಬಲಿಸುತತ್ತಳು ದೆಸೆಗೆ ಬೊಬ್ಬಿಡುತಾ
ಕಾಂತೆಯೊಜಿಲುವದನಿಗೆ ಗೋಕುಲ
ಕಾಂತೆಯರು ಹರಿತಂದು ದೆಸೆದೆಸೆ
ಗಂತರಾತ್ಮನ ನಜಿಸುತಿರ್ದರು ಶ್ರುತಿಗಳಂದದಲಿ ೩೨

ನಂದ ಮೊದಲಾದಖಿಳ ಗೋವರ
ವೃಂದವಾಗೋಪಿಯರ ಬಹಳಾ
ಕ್ರಂದಿತವನಾಲಿಸುತ ಬೀಳುತ್ತೇಳುತೈತಂದು
ಕಂದನಿರವನು ಕಾಣದುರಿಯಲಿ
ನಿಂದವೊಲು ಬಸವಳಿದಜಿಸುತಿರೆ
ಹೊಂದಿದರು ಧರೆಗೊಬ್ಬರೊಬ್ಬರ ಮೇಲೆ ತನಿಗೆಡೆದು ೩೩

ಅಂಗಣದಲಿಂತಖಿಳ ಗೋಕುಲ
ದಂಗನೆಯರೊಡನೊಡನೆ ಗೋಪರು
ಸಂಗಡಿಸಿ ಹಲುಬುತ್ತ ಹಂಬಲಿಸುತ್ತ ಮೂರ್ಛೆಯಲಿ
ಕಂಗೆಡುತ್ತಿರೆ ಕಮಲದೃಶನನು
ಹಿಂಗದಾ ಖಳನೊಯ್ದು ನಾ ಗಗ
ನಾಂಗಣಕೆ ತವೆಯಾಂತ ಶಿಶುರೂಪದ ಜಗನ್ಮಯನ ೩೪

ಭೀಕರಾಂಗವನಾಂತು ನಭದಲಿ
ನಾಕರಿಪುಕೊಂಡೊಯ್ಯುತಿರೆ ನಿಜ
ಗೋಕುಲದ ಪರಿಭವವನಾ ಸಂಕ್ಲೇಶ ಸಂಸ್ಥಿತಿಯು
ಶೋಕವನು ಕಾಣುತ್ತ ದೈತ್ಯನ
ನೇಕೆಕೊಂಡಾಡುವೆನೆನುತ್ತ ಕೃ
ಪಾಕರನು ದೈತ್ಯಾಸುಹರಣಕೆ ಮಾಡಿದನು ಮನವ ೩೫

ಅರಸಕೇಳಂಜಿದವೊಲಾತನ
ಕೊರಳನಿಕ್ಕೈಯಿಂದ ಹಿಡಿದಂ
ಬರದಲೊತ್ತಿದಡುಸುರಿಗುಬ್ಬನವಾಗಿ ಕಂಗೆಟ್ಟು
ಕರಿಯುವೋಲಿಳೆಗಚ್ಯುತನನಾಂ
ತುರದಲಮರಾರಾತಿ ಘೀಳಿಡು
ತಱಿಯುಮೇಲೊಗೆದಂತೆ ಬಿದ್ದನು ಭೀಕರಾಂಗದಲಿ ೩೬

ಮುಬ್ಬುಹರಿದುದು ಮುಳಲಗಾಳಿಗ
ಳುಬ್ಬಟೆಗಳಡಗಿದುವು ಗೋಕುಲ
ವೆಬ್ಬಿಸಿದ ವೋಲಾಯ್ತುನಭದಿಂದಿಳೆಗೆ ಖಳಕೆಡೆಯೆ
ಸರ್ಬಜನ ಚೇತರಿಸಿತಾಕ್ಷಣ
ಕೂರ್ಬಿಯಲಿ ಕೆಡೆದಸುರನೊಡಲಲಿ
ಸರ್ಬಗತನಿರೆ ಕಂಡು ಹರಿತಂದುದು ಜನಸ್ತೋಮ ೩೭

ಎತ್ತಿಕೊಂಡರು ಖಳನಕೊರಳನು
ಸುತ್ತಿಜೋಲ್ವಜಗನ್ಮಯನನುಱಿ
ಹೆತ್ತವರು ಗೋಕುಲದ ಜನ ಹೋದಸುವ ಪಡೆದಂತೆ
ನೆತ್ತಿಯನು ವಾಸನಿಸಿ ಹರುಷರ
ಸೋತ್ತರದ ಸುಸ್ನೇಹ ಜಲದಲಿ
ತತ್ವವಿದರಂತಾದ ರಾನಂದದಲಿ ಮುಳುಗಾಡಿ ೩೮

ಎತ್ತಲೀಶಿಶು ಜಗವನೊಂದೇ
ತುತ್ತು ಮಾಡುವ ಭೀಕರಾಂಗದ
ದೈತ್ಯ ನಿವನೆತ್ತಲು ನಭೋಗತಿಗೆಯಿದುವವನೆತ್ತ
ಮತ್ತೆಧರೆಯಲಿ ಕೆಡೆದು ನುಗ್ಗಹು
ದೆತ್ತಲುರದಲಿ ಲಂಬಿಸುವ ಶಿಶು
ವೆತ್ತಲ ದುಭುತವೆನುತ ಕಂಬನಿದುಂಬಿದನು ನಂದ ೩೯

ಆವದಿವ್ಯಜ್ಞಾನಿಯೋ ವಸು
ದೇವನಲ್ಲದಡಱಿವನೆಂತಿದ
ನೀ ವಿಚಿತ್ರೋತ್ಪಾತಗತಿಗಳಗಾಢ ಸಂಗತಿಯಾ
ದೇವನಾಗದೆ ಮಾಣನೆನುತ ಮ
ಹಾವಿರಾಗದಲಂದು ನೆರೆದಾ
ಗೋವಳರ ಮಧ್ಯದಲಿಕೊಂಡಾಡಿದನು ಯದುವರನಾ ೪೦

ನೋಡುವರು ಕಣ್ದಣಿಯೆ ಗುಣವನು
ಪಾಡುವರು ತಕ್ಕಯಿಸಿ ಕೈ ಮುಂ
ಡಾಡುವರು ಕುಳ್ಳಿರಿಸಿಕೊಂಡಂಕದಲಿ ಚಿನುಮಯನ
ಕೂಡಿಲಾಲನೆ ಪೋಷಣಂಗಳ
ಮಾಡಿ ದಣಿಯರು ಜನ್ಮಶತದಲಿ
ಮಾಡಿದಚ್ಯುತ ತುಷ್ಟಿಯೆಂತುಟೊ ಭೂಪಕೇಳೆಂದ ೪೧

ಒಂದು ದಿನ ನಿಜ ಬಾಲಕನನಾ
ನಂದದಲಿ ತೆಗೆದಪ್ಪಿ ತೊಡೆಯಲಿ
ನಂದಗೋಪಿ ಮನೋನುರಾಗದಲೆಸೆಯೆ ಕುಳ್ಳಿರಿಸಿ
ಇಂದುಮುಖಿ ಮೊಲೆಯೂಡಿದಳು ಮುದ
ದಿಂದಖಿಳಭುವನಾಶ್ರಯೋದರ
ಮಂದಿರಂಗುಪಸನ್ನ ಜನನಿಜಬಂಧುವಿಂಗೊಲಿದು ೪೨

ಲೀಲೆಯಲಿ ಮೊಲೆಯುಂಡುದಣಿದಾ
ಬಾಲಕನ ಮೊಗನೋಡಿ ಮುದ್ದಿಸಿ
ಸಾಲದೆನೆ ಮಗ್ಗುಲಲಿ ಮಹಿಮನನಪ್ಪಿಕುಳ್ಳಿರ್ದು
ಲಾಲಿಸುತ ಲಕ್ಷ್ಮೀಕರಾಂಬುಜ
ಲಾಲಿತಾಂಘ್ರಿಯು ಬಾಯಿದೆಱೆಯಲಿ
ಬಾಲೆಕಂಡಳು ಕಮಲಜಾಂಡಕಟಾಹ ಮಂಡಲವ ೪೩

ಕಂಡಳವನಿಯನಂಬರವನಾ
ಖಂಡಲಾದಿ ಸಮಸ್ತದಿವಿಜರ
ತಂಡವನು ತಾರಾಗ್ರಹಾನಲ ಚಂದ್ರಸೂರಿಯರ
ಮಂಡಲಂಗಳನುರು ನದೀ ಗಿರಿ
ಷಂಡ ಸಪ್ತದ್ವೀಪ ಸಾಗರ
ಷಂಡ ಕಾನನದೇಶನಗರಗ್ರಾಮಜನಸಹಿತ ೪೪

ಸಕಲ ಸಚರಾಚರದ ಜೀವ
ಪ್ರಕರವನು ಪಶುಪಕ್ಷಿಮೃಗ ವನ
ನಿಕರವನು ಗೋಕುಲವನಾ ಗೋಕುಲನಿವಾಸಿಗಳ
ನಿಕರವನು ತನ್ನವನು ಬಾಯ್ದೆಱೆ
ದಕೃತಕ ಬ್ರಹ್ಮನನು ಕಂಡಾ
ಸುಕೃತವೆಂತೈಯಿದೇನೆನುತ ತಳ್ಳಣಿಸಿದಳು ನಡುಗಿದಳು ೪೫

ಇಂತು ತನ್ನೊಂದೇಕದೇಶದ
ಲಂತವಿಲ್ಲದೆ ತೋರ್ಕು ಮಾಯಾ
ಭ್ರಾಂತಿ ಜಗದಾಕಾರದಿಂದೆಂಬುದನು ತೋರ್ಪಂತೆ
ಭ್ರಾಂತಿ ವಿರಹಿತನಾತ್ಮವದನಾ
ಭ್ಯಂತರಾಳದೊಳಖಿಳ ಭುವನ
ಭ್ರಾಂತಿಯನು ತೋಱಿದನು ತಾಯಿಗೆ ನಿಜವಿನೋದದಲಿ ೪೬

ಕಂಗಳನು ನೆಱೆಮುಚ್ಚಿ ತರುಣಿಲ
ತಾಂಗಿ ಭಯದಲಿ ನಡುಗುವಂಗೋ
ಪಾಂಗದಲಿ ಕುಳ್ಳಿರಲು ಹರಿಶರಣೆನುತ ಮನದೊಳಗೆ
ಹಿಂಗಿದಾದೃಗ್ಭ್ರಾಂತಿ ನೆಱೆ ಬಹಿ
ರಂಗ ದೃಷ್ಟಿಗೆ ತೋಱಿತೋರ್ಕೆಯ
ಡಂಗುವುದು ನಿಜದೃಷ್ಟಿಯೊಳಗೆಂಬುದನು ತೋರ್ಪಂತೆ ೪೭

ಮಱೆದು ಮೊಲೆಯೂಡಿದಳು ಮುನ್ನಿನ
ತೆಱದಲಾಗಳೆ ಗೋಪಿ ತತ್ವವ
ನಱಿದ ಮುನಿಯಂತೊಬ್ಬನನೆ ಬಾಹ್ಯದಲಿ ಕಾಣುತ್ತ
ಅಱಿವು ಮಱವೆಗೆ ಸಾಕ್ಷಿಯಾದಂ
ತರನವೋಲಿರ್ದಳು ನಿತಂಬಿನಿ
ಕಿಱಿದು ಕಾಲಾರಬ್ಧ ಭೋಗದಯೋಗಿಯಂದದಲಿ ೪೮

ಇರಲು ಕೆಲವು ದಿನಕ್ಕೆ ಹರಿ ರಾ
ಮರು ಶಿಶುತ್ವದ ಲೀಲೆಗಳನನು
ಕರಿಸಿ ಗೋಕುಲದೊಳಗೆ ತನುವೆಳಗುತ್ತ ಹೆತ್ತವರ
ಹರುಷ ರಸವಂಕುರಿಸೆ ನಿಜಕರ
ಚರಣಯುಗಳವನವನಿಯಲಿ ವಿ
ಸ್ತರಿಸಿ ಹರಿಹರಿದಾಡಕಲಿತರು ನಿಜವಿನೋದದಲಿ ೪೯

ಹೊಂಪೊಡರು ಕಿರುಗೆಜ್ಜೆ ಘಂಟೆಗ
ಳಂದವಡೆದರಳೆಲೆ ಕುರುಳ್ಗಳ
ಕಂದಳಿತ ಕಾಂತಿಗಳ ಕರ್ಣಾಭರಣದೀಪ್ತಿಗಳ
ಸಂದಮುದ್ರಿಕೆ ಕಂಕಣಂಗಳ
ಗೊಂದಣದ ಭೂಷಣಗಳಲಿ ಗೋ
ವಿಂದರಾಮರು ಮೆಱೆದರಂಗಣದೊಳಗೆ ನಲಿದಾಡಿ ೫೦

ಶ್ವೇತನೀಲ ಮಹಾದ್ರಿಗಳು ಮನ
ಮೋತು ನರ ಶಿಶುತನವನಾಂತೀ
ಭೂತಳದೊಳುದಿಸಿದವೊ ಮೇಣು ಸಿತಾಸಿತದ್ಯುತಿಯೊ
ಖ್ಯಾತ ರತ್ನದ್ವಯವೊ ಜಂಗಮ
ಜಾತ ತರುಣ ಸುರದ್ರುಮಂಗಳೊ
ಚೇತನಾತ್ಮಕರೆನೆದರುವಮಾತೀತರೆಂದೆನಿಸಿ ೫೧

ನೆರೆನೆರೆದು ಗೋಕುಲದ ಮುಮ್ಮನೆ
ನೆರೆಮನೆಯ ಬಹುಪುಣ್ಯವಂತೆಯ
ರರಿವಿಜಯರಾಟವನು ದಿವ್ಯಮನೋಹರಾಕೃತಿಯ
ಪರಿಪರಿಯ ಲೀಲೆಗಳಲರ್ಭಕ
ಚರಿತವನು ನೋಡುತ್ತ ಕೃತ್ಯಾಂ
ತರಗಳನು ನೆಱಿಮಱಿದು ನಗುತೆಸೆದಿಪ್ಪರನವರತ ೫೨

ನಡೆಯಕಲಿಸುವಳಗ್ರಹಸ್ತವ
ಹಿಡಿದು ತ್ರಿಭುವನ ಸೂತ್ರಧಾರಗೆ
ನುಡಿಯ ಕಲಿಸುವಳಖಿಳ ವೇದಮಯಂಗೆ ಚಿನುಮಯಗೆ
ತಡೆಯದುಣಕಲಿಸುವಳು ನಂದನ
ಮಡದಿಸಹಜಾನಂದ ತೃಪ್ತಂ
ಗಡಿಗಡಿಗೆ ಪಾಲ್ಬೆಣ್ಣೆಯನು ಬಾಯೊಳಗೆ ಬೆರಳಿಟ್ಟು ೫೩

ಏನನೆಂಬೆನು ಭೂಪ ಭಕ್ತಾ
ಧೀನತಾನೆಂಬುದನು ಮೆಱಿದನು
ದಾನವಾಂತಕನನುಕರಿಸಿ ಲೀಲಾಗುಣಾಕೃತಿಯ
ಧ್ಯಾನ ಗೋಚರಮೂರ್ತಿನಂದನ
ಮಾನಿನಿಗೆ ಶಿಶುವಾಗಿ ನಟಿಸಿದ
ನೀ ನಿಖಿಳ ಭವಬಂಧ ವಿಧ್ವಂಸನದ ಲೀಲೆಗಳ ೫೪

ಮತ್ತೆ ಕೆಲವು ದಿನಕ್ಕೆ ಬಲಪುರು
ಷೋತ್ತಮರು ಮುಮ್ಮನೆಯ ನೆರೆಮನೆ
ಯತ್ತಲತ್ತಲು ಕೆಳೆಯ ಗೋಪಕುಮಾರಕರು ಸಹಿತ
ಸುತ್ತಿಸುಳಿದಲ್ಲಲ್ಲಿಗೆಡೆಯಾ
ಡುತ್ತ ಬೀದಿಯ ಹುಡಿಗಳಲಿ ಹೊರ
ಳುತ್ತ ಮಱಿಯಾನೆಗಳವೋಲೆಸೆದರು ನಿಜೇಚ್ಛೆಯಲಿ ೫೫

ನೆರೆದು ಬಂದಾರಾಮಕೃಷ್ಣರ
ಪರಮಮಂಗಳ ಪುಣ್ಯಚರಿತವ
ನೊರೆವಮನದರ್ತಿಯಲಿ ಗೋಪಿಯರೈದೆ ತಮತಮಗೆ
ಸರಭಸದಲಂದಾ ಯಶೋದೆಯ
ಹೊರೆಗೆ ನಗುತ್ತೈತಂದು ಮುದ್ದುಗ
ಳರವನೀಕ್ಷಿಸುತೆಂದರುನ್ನತ ಬಾಲಲೀಲೆಗಳ ೫೬

ಹೊಕ್ಕು ಕಱೆಯದಮುನ್ನ ಕಱುಗಳ
ಮಿಕ್ಕು ಬಿಡುವರು ಜಱೆದಡಳುಕದೆ
ನಕ್ಕು ಮಱಸುವರದನು ಚತುರೋಪಾಯ ವಿಧಿಗಳಲಿ
ಒಕ್ಕಲಿಕ್ಕುವರೆಮ್ಮ ಮನೆಗಳ
ನೆಕ್ಕತುಳದಲಿ ತಾಯೆ ಪಡೆದೌ
ಮಕ್ಕಳನು ಭವಗೆಡಿಸಲೆಂದೀ ಸಕಲ ಗೋಕುಲವ ೫೭

ತಾಯೆನಿನ್ನಾಣೆಂದು ಮೊಸರನು
ಬಾಯಿಗೆತ್ತಿದರೆಮ್ಮ ಮಕ್ಕಳ
ಕಾಯಲರಿದಂಜುವೆವು ಬಿನ್ನಹಮಾಡುವಡೆ ನಿಮಗೆ
ಸ್ತ್ರೀಯಯೋಗಾಚಾರ್ಯರಿವದಿರು
ಪಾಯಕೋವಿದರಕಟಕಟ ನಿ
ರ್ದಾಯದಲಿ ನೆಱೆ ಕೆಡಿಸಿದರು ಗೋಕಲದ ವೈಭವವ ೫೮

ಉಂಡರದಕಾರಳಲುವರು ನೆಲ
ನುಂಡು ಕೆಟ್ಟುದು ಹಾಲಮೊಸರನು
ಕಂಡದೆಸೆಗೀಡಾಡುವರು ನೀಡುವರು ಕಪಿಗಳಿಗೆ
ಕಂಡಿದೇನೆನಲೊಡೆವರಿವರಾ
ಭಾಂಡವನು ಧರಣಿಯಲಿ ನೆಱೆ ಗೋ
ಳುಂಡೆ [1]ಗೆಡಿ[1] ಸಿದರಾರು ನಿನ್ನವರಂತೆ ಗೋಕುಲವ ೫೯
ನೆಲಹುಗಳಲಿರಿಸಿದರೆ ಕೈಗಳು
ನಿಲುಕದಿದ್ದಡೆ ಮ[2]ನೆ[2] ಯೊರಳ್ಗಳ
ನಿಳುಹಿ ಕೆಳೆಯುರಹೆಗಲನೇಱಿ ದುರಂತ ವಿಕ್ರಮರು
ಕಳೆದುಕೊಂಬರು ಹಾಲು ಬೆಣ್ಣೆಗ
ಳುಳಿವುಪಾಯುವ ಕಾಣೆನೆಮ್ಮಲಿ
ಛಲವದುಳ್ಳಡೆ ತರಿಸಿಕೊಂಬುದು ತಮ್ಮ ಗೋಧನವ ೬೦
ಮೇಲೆ ಮತ್ತಿರಿಸಿದಡೆ ತಳವನು
ಕೋಲಲಿಱಿದೊಡ್ಡುವರು ಬಾಯನು
ಕೋಲುನಿಲುಕದಡಿಡುವರಾ ಭಾಂಡವನು ಪಾಲ್ಮೊಸರ
ಕಾಳಗತ್ತಲೆಯೊಳಗೆ ಬೈಚಿಡೆ
ಸಾಲರತುನಾಭರಣ ಕಾಂತಿಯು
ಮೇಳವಿಸಿ ಮೇಣೊಡಲಕಾಂತಿಯು ತೋಱಿ ತರಿಸುವರು ೬೧
ಎಂದು ಸಭಯಾಕುಲಿತನಹ ಗೋ
ವಿಂದನಮಳ ಶ್ರೀಮುಖಾಬ್ಜವ
ನಿಂದುಮುಖಿಯರು ನೋಡುವರ್ತಿಗೆ ಸಂದುತವುತಮಗೆ
ಎಂದರಾ ಗೋಪಿಯರೊಡನೆ ಪೂ
ರ್ಣೇಂದುಮುಖಿ ನಸುನಗುತ ತಾ ನಿಂ
ತೆಂದಳಾ ನಿಜಬಾಲಕನ ಸಿರಿಮೊಗವನೀಕ್ಷಿಸುತ ೬೨

[1]ಗೊಳಿ[1] (ಖ) [2]ಣೆ[2]

ತುಡುಕಿ ಬೆಣ್ಣೆಯ ಮೆಲುವ ಕೃಷ್ಣನ
ಹಿಡಿದು ತಂದೊಪ್ಪಿಸುವುದೆನಗವ
ಗಡೆಯತನವನು ಮಾಣಿಸುವೆನೆನಲಾಗಲೆಂದೆನುತ
ಮಡದಿಯರು ತಂತಮ್ಮ ಮನೆಗಳಿ
ಗಡಿಯಿಡುತ್ತಿರೆ ಮುಂದೆ ಹೊ[1]ಕ್ಕೊಡ
ನೊಡನೊಡನೆ ಮನೆಮನೆಯ ಪಾಲ್ಬೆಣ್ಣೆಗಳನುಗಿದುಂಡಾ[1] ೬೩

ಮತ್ತೆ ಮನೆಮನೆಗಳಿಗೆ ಬಂದಾ
ಮತ್ತಕಾಶಿನಿಯರು ಮುಕುಂದನ
ವೃತ್ತವನು ಕಾಣುತ್ತ ಪಾಲ್ಮೊಸರ್ಬೆಣ್ಣೆಗಳ ತೆಗೆದು
ಎತ್ತಿ ಮೆಲುವುದ ಕಂಡು ಗಹಗಹಿಸಿ
ಸುತ್ತ ಕೈ ಬಾಯುರಗಳೆಡೆಯೊಳು
ಮೆತ್ತಿದೆಂಜಲುಸಹಿತ ಹಿಡಿದರುತಮತಮಗೆ ಹರಿದು ೬೪

ನೀರೆಯರು ನಯನಾಭಿರಾಮನ
ಕೋರಡಿಗತನದಿರವನೊಮ್ಮೆಯು
ದೂರಲ್ಕೆತರಲೊಬ್ಬರಱಿಯದವೋಲು ಹೊಱವಂಟು
ಬೇಱೆ ಬೇಱೈದೆತ್ತಿಕೊಂಡಾ
ಮೂಱು ಲೋಕದಧೀಶ್ವರನ ಕೈ
ಸೂಱೆಗಿದುಕಡೆಯೆನುತ ತಂದರು ಗೋಪಿಯಿದ್ದೆಡೆಗೆ ೬೫

ಬಂದು ಗೋಪಿಯು ಕೈಯಲಿದ್ದ ಮು
ಕುಂದನನು ಕಾಣುತ್ತ ಬಱಿಗೈ
ಯಿಂದ ತಮ್ಮಿದ್ದಿರವನೀಕ್ಷಿಸುತೀನಿದೇನೆನುತಾ
ಇಂದುಮುಖಿಯರು ನೋಡಿ ನುಡಿಯದೆ
ಮಂದಿರಂಗಳಿಗೈದಿದರು ಗೋ
ವಿಂದನಿರವಚ್ಚರಿಯೆನುತ ತಮತಮಗೆ ಬೆಱಗಾಗಿ ೬೬

1 ಕ್ಕೊಡನೊಡನೆ ಮನೆಮನೆಯ ಪಾಲ್ಬೆಣ್ಣೆಯನುಸಿದುಂಡ[1] (ಖ)

ಮತ್ತೆ ಕೇಳೊಂದು ದಿನ ನಂದನ
ಮತ್ತಕಾಶಿನಿ ದಾಸಿಯರ ಗೃಹ
ಕೃತ್ಯದಲಿಬೆಸಸುತ್ತ ಸಿರಿಮಂಚದಲಿ ನಿಜಸುತನಾ
ಮೂರ್ತಿ ನಿದ್ರೆಯಭರದಲಿರೆ ಕಾ
ಣುತ್ತ ಮೊಸರನು ಕಡೆದಳಂದಾ
ಚಿತ್ತವಲ್ಲಭನಮಳಗುಣಗಣಗಳನು ಪಾಡುತ್ತ ೬೭

ಇಂತುಪಾಡುತ ಮೊಸರ ನಂದನ
ಕಾಂತೆ ಕಡೆವುತ್ತಿರಲು ಲಕ್ಷ್ಮೀ
ಕಾಂತನೊಯ್ಯನೆ ವ್ಮೈಮುರಿದು ಸಿರಿಮಂಚದಿಂದಿಳಿದು
ಮುಂತೆಕಡೆಗೋಲ್ವಿಡಿದು ತಾಯನು
ಕಂತುಪಿತನಂಡಲೆದು ಮೊಲೆಯನು
ಸಂತವಿರುತೆನಗೂಡೆನುತ ಕಾಡಿದನು ಮಿಗೆಯಳುತ ೬೮

ಎತ್ತಿ ಕೊಂಡಾಕಾಂತೆ ತೊಡೆಯಲಿ
ಚಿತ್ತಸಾಕ್ಷಿಯ ಕುಳ್ಳಿರಿಸಿಕೊಂ
ಡತ್ಯಧಿಕ ಪುತ್ರಾನುರಾಗಸ್ನುತಪಯೋಧರವ
ಇತ್ತು ಮುಗ್ಧ ಲಲಪ್ಪಿ ಕುಳ್ಳಿರ
ಲತ್ತಲಾ ಹಾಲೊಲೆಯಮೇಲು
ದ್ವೃತ್ತವಾಗಲು ಹೋದಳಾಮುರಹರನಧರೆಗಿಳುಹಿ ೬೯

ಊಡುತಲಿ ಮೊಲೆಗಳನು ತೃಪ್ತಿಯ
ಮಾಡದಾ ನಿಜಜನನಿ ಹಾಲ
ಕ್ಕಾಡಿತೊಲೆಯಲೆನುತ್ತ ಹೋಗೆ ಹರಿಕನಲ್ದಳುತ
ಈಡಿಲ್ಲದವರೋಷದಲಿ ಕಚ್ಚಿದ
ನೌಡನಡಿಗಡಿಗೊಡಲು ಕಂಪಿಸೆ
ನೋಡಿದನು ಕೆಲಬಲನನಾ ದಧಿಮಥನಭಾಜನವ ೭೦

ಹೊಕ್ಕು ತೆಗೆದಂದಸುಬೆಗಲ್ಲನು
ಮಿಕ್ಕುಮಿಾಱುವ ಕೋಪದಿಂದೆ
ತ್ರಿಕ್ಕಿದನು ಮಂಥಣಿಯುಮೇಲಿದ್ದೆಸೆಯು ನೀಕ್ಷಿಸುತ
ಸಿಕ್ಕಿ ಮೊಸಱಲಿ ಜಾಱಿಬೀಳುತ
ನಕ್ಕು ಬೆಣ್ಣೆಯು ಬೆರಟಿ ಕೈಯುಲಿ
ತಕ್ಕವಿಸಿಕೊಂಡೊಯ್ಯನೆಯ್ದಿದನೋವರಿಯುಮರೆಯೂ ೭೧
ಮಗನು ಕನಲದೆ ಮಾಣನೆನಗಿ
ನ್ನೆಗವೆನುತ್ತೆಯಿತಂದು ಕಂಡಳು
ಮಗನ ಕೆಲಸವ ನೆತ್ತಹೋದನೊ ಧೂರ್ತನೆಂದೆನುತ
ನಗುತ ಸೆಳೆಗೊಂಡೊಯ್ಯನೊಯ್ಯನೆ
ಮುಗುಧೆನೋಡುತ ಹಜ್ಜೆಗೊಂಡಾ
ನಿಗಮದೂರನನಱಸಿ ಕಂಡಳು ಬೇಱಿಮನೆಯೊಳಗೆ ೭೨
ಮುಟ್ಟಹಿಡಿದೆಲೆ ಮಗನೆ ಮಾಳ್ಪುದು
ಕಷ್ಟತನವೇಕೆನ್ನೊಡನೆ ಯಿಾ
ಸೃಷ್ಟಿಯೊಳಗೀ ನಿನ್ನ ಹೋಲುವ ಮಕ್ಕಳೀಪರಿಯ
ಹುಟ್ಟಿಲಱಿವರೆ ದುರುಳತನದಲಿ
ಹುಟ್ಟಿದವರುಂಟೇ ಸಮಾನರು
[1] ಕಟ್ಟಿದಲ್ಲದೆಯುಱಿಯೆ [1] ಯೆಂದಳು ಗೋಪಿ ಸೆಳೆಗೊಂಡು ೭೩
ಎನಲಳುತ್ತಳುತಂಜಿದವೊಲಾ
ನನ ಕೊರಗಿ ಕೈವೆರಳ ಮಱಿಯುಲಿ
ಜನನಿಯುನು ನೋಡುತ್ತ ನಾಡಾಡಿಯು ಶಿಶುವಿನಂತೆ
ತನು ನಡುಗಿ ಕಾಡಿಗೆ ಸಹಿತ ಕಂ
ಬನಿಮುಖೇಂದು ಕಳಂಕವಾಗಲು
ಮುನಿಗಳನು ನಗಿಸಿದನು ನರಶಿಶುತನದ ನಟನೆಯುಲಿ ೭೪

[1] ಕುಟ್ಟಿದರೆ ನೀನಱಿಯೆ [1] (ಖ)

ಬಲ್ಲೆನಾನಿದಕೊಂದು ಬುದ್ಧಿಯ
ನಿಲ್ಲಿಯೇ ನೋಡೆಂದು ಮರದೊರ
ಳಲ್ಲಿ ಕಟ್ಟಿರಿಸಿದರೆ ನಿನ್ನನು ಬಳಿಕ ಸಾಹಸವಾ
ಬಲ್ಲಿದನೆ ಮಾಡುವಡೆನುತ್ತು
ತ್ಫುಲ್ಲಮುಖಿ ತರಿಸಿದಳು ಕಡೆವೊದ
ಲಿಲ್ಲದಚ್ಯುತನುದರವನು ಬಂಧಿಸಲು ದಾಮುಗಳ ೭೫

ಜಗದುದರನುದರವನು ಹುಲುನೇ
ಣುಗಳು ಸುತ್ತಲು ನೆಱೆಯದಿರಲಾ
ನಗುವ ಗೋಪಿಯರೊಡನೆ ನಗುತ ಯಶೋದೆ ಬೆಱಗಾಗಿ
ಜಗುಳುವರೆ ಮುಡಿಗಳಲಿ ಸತಿಕೈ
ದೆಗೆದು ಬಳಲುತಸಿಂದಿರಲು ಕರು
ಣೆಗಳ ದೇವನು ಬಂಧನಕ್ಕೊಳಗಾದನಾಕ್ಷಣಕೆ ೭೬

ಮಾಣೆ ನೀನೀ ದುರುಳತನವನು
ಮಾಣೆ ಹೇಳಿದಡಿನ್ನು ಮಾಡೆ
ನ್ನಾಣೆ ನೋಳ್ಪಿನು ಮಾಡಲಾಪಡೆ ಪಿತಗತನಗಳನು
ಕಾಣವೀ ಜಗವೆಯಿದೆನುತ್ತಾ
ಜಾಣೆ ಮನೆಗೆಲಸಕ್ಕೆ ಹೋಗಲು
ಕಾಣುತವೆ ಹರಿ ನೆನೆದನದುಭುತ ಬಾಲಲೀಲೆಗಳ ೭೭

ಮುನ್ನ ನಾರದ ಶಾಪದಿಂದವೆ
ಕಿನ್ನರೇಶ್ವರ ಪುತ್ರರಿಬ್ಬರು
ವರ್ಣಿಸಲು ನಳಕೂಬರ ಮಣಿಗ್ರೀವರೆಂಬವರು
ತನ್ನ ಮನೆಯಂಗಳದ ಕಡೆಯಲಿ
ಸನ್ನಿವೇಶವ ಹಡೆದು ಮಿಗೆ ಬೆಳೆ
ದುನ್ನತಾಗ್ರದಲವಳಿಮತ್ತಿಗಳಾಗಿರಲು ಕಂಡ ೭೮

ಇವರು ಧನದಾತ್ಮಜರು ಮುನಿಪುಂ
ಗವನುತನ್ನೇಕಾಂತ ಭಕ್ತನು
ಸವನಿಸಿತ್ತಿದು ತನಗೆ ಕರ್ತವ್ಯಾಂಶವೆಂದೆನುತಾ
ಭವವೆ ಭವ ಬಂಧನವೆ ಬಂಧನ
ವವರ ಸುಖವೇ ತನ್ನ ಸುಖವಿಂ
ತಿವರ ಶಾಪವಿಮೋಕ್ಷವೇ ಋಣಮೋಕ್ಷವೆನಗೆಂದ ೭೯

ಒರಳನೆಳವುತ್ತೆಳವು ತೊಯ್ಯನೆ
ಹೊರಗೆ ನೋಡುತ ನಗುತದಾಗೋ
ದರ ನೆನಿಸಿಕೊಳುತವಳಿ ಮತ್ತಿಯ ಮರನಸಮ್ಮುಖಕೆ
ಕರುಣಿಗಳದಾತಾರ ನೆಯಿತಂ
ದ್ಮರವಣಿಸಿ ನುಸುಳೆರಡು ಮರನಂ
ತರದಲೈದಿದ ನಡ್ಡಬಿದ್ದುದು ಹಿಂದೆ ಮರದೊರಳು ೮೦

ಕಡುಗಿತೆಗೆದಡೆ ಮರದೊರಳು ಸಹಿ
ತೊಡನೆ ಧರೆಕಿತ್ತೆತ್ತಿ ಕುಲಗಿರಿ
ನಡುಗೆ ದೆಸೆಮಾರ್ಮೊಳಗೆ ವಾತಾವಳಿಗಳೊಡನೆ
ಕಡಲುಕದಡಲು ಬೇರುಸಹಿತು
ಗ್ಗಡದ ಛಟಛಟರವದಲಿಳೆ ಬಾ
ಯ್ಬಿಡಲು ಬಿದ್ದುದು ಬೆಳೆದ ಹೆಮ್ಮರನೆರಡು ಧರಣಿಯಲಿ ೮೧

ಹಱಿಯುದುದರದ ನೇಣು ಮೇಣ್ನಸು
ಜಱಿಯುದಾಡುವ ಗೋಕುಲದ ಕರು
ತುಱುಗಳನು ನಸುನೋಯದೆಱಗದೆ ಮಂದಿರದದೆನೆಗೆ
ನೆಱಿ ಜಗನ್ಮಯನತುಳಲೀಲೆಯ
ನಱಿವರಾರಾ ಬಿದ್ದಮಱಗಳ
ಮಱಿಯಲುದಿಸಿದರಿಬ್ಬರಮರಪ್ರವರರಾಕ್ಷಣಕೆ ೮೨

ಮುಕುಟ ಕುಂಡಲ ಹಾರ ಮಣಿ ಮೌ
ಕ್ತಿಕದ ದಿವ್ಯಾಂಬರದ ಕಾಂತಿ
ಪ್ರಕರದಲಿ ಪಾವಕನವೊಲು ಬೆಳಗುತ್ತ ದೆಸೆದೆಸೆಯ
ವಿಕಟತನುಕಾಂತಿಯಲಿ ತೊಳತೊಳ
ಪಕುಟಿಲಾತ್ಮರು ಕಂಡು ಕಮಲಾಂ
ಬಕನಪದಕಮಲದಲಿ ಬಿದ್ದರು ಜಯತು ಜಯಯೆನುತ ೮೩

ಎತ್ತಿದನು ನಸುನಗುತಲವರವರ
ಮಸ್ತಕಂಗಳ ನೆಱಡುಕೈಯಲಿ
ಕೃತ್ತಿವಾಸಪ್ರಿಯಸುತರಿರಂಜದಿರಿ ನೀವೆಂದು
ಇತ್ತನಭಯವನಮರಮುನಿ
ವೆತ್ತು ಶಾಪವ್ಯಾಜದಲಿ ಸುಮ
ಹೋತ್ತಮಾಂಘ್ರಿಯದರುಶನವೆ ಭವಮೋಕ್ಷಕರವೆಂದ ೮೪

ಎನ್ನವರ ದರುಶನವೆ ಸಂಸಾ
ರಾರ್ಣವದಕಡೆ ಜೀವಜಾತ
ಕ್ಕೆನ್ನವರನುಗ್ರಹವೆ ಮಾಳ್ಪುದು ತನ್ನನುಗ್ರಹವ
ಎನ್ನವರೊಳಾನೆನ್ನೊಳೆನ್ನಾವ
ರನ್ಯರಲ್ಲೆಂದಱಿತು ಸಂಪ್ರತಿ
ಪನ್ನ ಬುದ್ಧಿಗಳಾಗಿಹುದು ನೀವೆಂದು ನೇಮಿಸಿದ ೮೫

ಭಾಗವತರೆಂದೆನಿಸಿ ತನ್ನವ
ರಾಗಿ ಹೋಗಿಯೆನುತ್ತ ಕರುಣಾ
ಸಾಗರನು ಬೀಳ್ಕೊಡಲು ಹರಿಯನು ಮೂವೆ ಬಲವಂದು
ಭೋಗಿಶಯನನ ಚರಣದಲಿ ತಲೆ
ವಾಗಿ ಪರಿತೋಷದಲಿ ಪುಳಕಿತ
ರಾಗುತವೆ ಬೀಳ್ಕೊಂಡರಳಕಾಪುರಿಗೆ ಧನದಜರು ೮೬

ಅತ್ತಲಾನಂದಾದಿ ಗೋಪರ
ಮೊತ್ತವೀಪ್ರಳಯದ ಮಹಾಧ್ವನಿ
ಯೆತ್ತಲೇನೇನೆನುತ ಹರಿತಂದವಳಿ ಮತ್ತಿಗಳು
ಕಿತ್ತು ಬಿದ್ದಿರೆ ಕಂಡು ತಮ್ಮನೆ
ಕುತ್ತಿ ಕೆಡಹಿದವೋಲು ನಡುನಡು
ಗುತ್ತ ಬಿದ್ದುದು ಮೂರ್ಛೆಯಲಿ ಗೋಕುಲವದಾಕ್ಷಣಕೆ ೮೭

ಬೀಳಲೇಕೀ ಹೆಮ್ಮರಂಗಳು
ಗಾಳಿಯಿಲ್ಲದೆ ಪ್ರಳಯಕಾಲದ
ಗಾಳಿಗೀ ಮರಕೀಳಲಱಿವುವೆ ಕಾಲಭೈರವನ
ತೋಳುಗಳ ವೋಲಿವೆಯೆನುತಾ
ಲೋಲಮತಿಗಳು ಹರಿದು ಬಂದಾ
ಬಾಲಕನ ನಾಮರಂಗಳಿಡೆಯಲಿ ಕಂಡರಚ್ಯುತನ ೮೮

ಭೂತಳವನಡುಗಿಸುವ ಬಹಳೋ
ತ್ಪಾತವಾಗದೆ ಮಾಣದೆನುತವೆ
ಕೌತುಕದಲೆಯಿತರಲು ನುಡಿದರು ನೆರೆದ ಬಾಲಕರು
ಕಾತರಿಸದಿರಿ ಕೃಷ್ಣನೇ ತರು
ಘಾತಕನು ಮರದೊಳುಸಿಲುಕಿದ
ಡೀತನೆಳೆಯಲು ಬಿದ್ದುದಿದ ನಾವ್ಕಂಡೆವಿಂದೆನುತ ೮೯

ಹೋಲದಿದು ಹೆಮ್ಮರಗಳನು ಶಿಶು
ಕೀಳಲಱಿವನೆ ಕಂಡೆವೆಂಬೀ
ಬಾಲಕರನೇನೆಂಬೆವ ಘಟಿತವೆಂದರದಱೊಳಗೆ
ಲೋಲಮಾನಸರೆಂದರೆಲ್ಲಾ
ಬಾಲಕರಪರಿಯಲ್ಲ ಕೃಷ್ಣನ
ಲೀಲೆ ಕೌತುಕವೆನುತ ತೆತ್ತರು ಸಂಶಯಕೆ ಮನವ ೯೦

ಮಕ್ಕಳನು ಮರದೊರಳಲೀ ಪರಿ
ಸೊಕ್ಕಿ ಕಟ್ಟಿದರುಂಟೆ ನಡುವಿಂ
ಗಕ್ಕಟಕಟಾ ಕೆಟ್ಟೆನೀ ಹೆಂಗಸಿನ ದೆಸೆಯಿಂದ
ಮಕ್ಕಳಿಂದೇನೊಡಲ ಕೇಡಿನ
ಮಕ್ಕಳೀ ತನ್ನಾನೆ ಮೂಜಗ
ಕಕ್ಕಜದ ಶಿಶುವೆನುತ ಕಂಬನಿದುಂಬಿದನು ನಂದ ೯೧

ಇಂತು ಗೋಕುಲದೊಳಗೆ ಲಕ್ಷ್ಮೀ
ಕಾಂತನಘಟಿತ ಬಾಲಕೇಳಿಯು
ಕಂತುಪಿತನನುಕರಿಸಿ ಲೋಕಾನುಗ್ರಹಾರ್ಥದಲಿ
ಮಂತ್ರಮೂರುತಿ ಕೆಳೆಯರೊಡನೆ ದು
ರಂತವಿಕ್ರಮನಖಿಳಗೋಕುಲ
ಕಾಂತೆಯರ ಕಂಗಳಿಗೆ ಬೀರುತ್ತಿರ್ದನುತ್ಸವವ ೯೨

---

೫

# ಬೃಂದಾವನ

ಭೂತಳಾಧಿಪ ಕೇಳು ಗೋಪ
ವ್ರಾತವಿಂತು ಬೃಹದ್ವನದಲು
ತ್ಪಾತವನು ಕಾಣುತ್ತ ನೆರೆದೊಂದಾಗಿ ತಮ್ಮೊಳಗೆ
ಹೇತುವನು ನಿಶ್ಚಯಿಸಲರಿಯದೆ
ಕಾತರಿಸಿ ಮರುಗಿದರು ಋಷಿಕುಲ
ಜಾತನಾ ವಸುದೇವನಕಟಕಟೆನುತ ಮರುಕೊಳಿಸಿ ೧

ಸಾಕುನಮಗೀವನದಲಿರವಿ
ನ್ನೇಕೆ ಶಿಶು ಪಶುವೃದ್ಧವನಿತಾ
ನೀಕ ಕಂಗೆಡಲೇಕೆ ಬಹುಳೋತ್ಪಾತನಿಕರವಿದು
ಔಕಿಕೊಲ್ಲದಮುನ್ನ ವಿಪಿನವಿ
ವೇಕವುಳ್ಳರೆ ಹೇಳಿಯೆನಲುವಿ
ವೇಕಿಸುತ ನೆರವಿಗಳಲುಪನಂದಾಖ್ಯನಿಂತೆಂದ ೨

ಒಂದುವನವಿಹುದಖಿಳ ಖಗಮೃಗ
ವೃಂದ ಸಹಿತಮುರವನಿತಾ
ವೃಂದ ನಿತ್ಯೋತ್ಸವ ವಿವರ್ಧನವೆನಿಸಿ ಧರಣಿಯಲಿ
ನಂದನಕ್ಕೊರೆಮಿಗಿಲು ಶಿಶುಪಶು
ವೃಂದ ಸೇವ್ಯಸ್ಥಾನ ಸುರತರು
ವೃಂದ ವಿಪುಳಚ್ಛಾಯೆಯಲಿ ಫಲಪುಷ್ಪಭರಗಳಲಿ ೩

ಸಾಯದೀಯುತ್ಪಾತ ಶತದಲಿ
ನೋಯದಿಲ್ಲಿಂಮುನ್ನ ಗಮನೋ
ಪಾಯವನು ನಿಶ್ಚಯಿಸಿ ನೀವಿಂದೇ ವನಾಂತರಕೆ
ಬಾಯಬಿಡುವೀ ತರುಣವೃದ್ಧನಿ
ಕಾಯಕಜುತುಜುನಹಿತ ಹೊಱವಂ
ಟಾಯುವಂತರೆ ಇಲ್ಲಿ ನಾವಿಹುದುಚಿತವಲ್ಲೆಂದ ೪

ಎಂದಡುಪನಂದೋಕ್ತಿಯನು ಸಾ
ನಂದದಲಿ ನೆಗಳುತ್ತ ಗೋಪರ
ವೃಂದ ಕರ ಲೇಸೀಗಳಿಂತಿರೆ ಹೋಗಬೇಕೆನುತ
ಅಂದಿನಾದಿನವಾ ಮುಹೂರ್ತದ
ಲಂದ ವಿಟ್ಟರು ಭಂಡಿಗಳ ಭರ
ದಿಂದ ಹೊಡಿದರಡಕಿದಗು ಮನೆಸರಕುಬರಕುಗಳ ೫

ಏಱಿದರು ಬಂಡಿಗಳನಾತುಱು
ಗಾಱರಾ ಸ್ತ್ರೀ ಬಾಲವೃದ್ಧರು
ಮೀಱಿದರು ಕೆಲಬಲಕೆ ಕಿತ್ತಾಯುಧದ ಗೋವಳರು
ಸಾಱಿದರು ಕೊಂಬುಗಳು ಕೊಳಲುಗ
ಳೋರು ಗುಡಿಸಿದುದವನಿತಳ ಕೈ
ಮೀಱಿ ನಡೆದುವುಕೂಡೆ ತುಱುವಿಂಡುಗಳು ಸಂದಣಿಸಿ ೬

ಹರಿಬಲರುಸಹಿತೊಂದು ಬಂಡಿಯು
ಲಿರೆ ಯಶೋದಾರೋಹಿಣಿಯರಾ
ನೆರವಿಗಳ ಮಧ್ಯದಲಿ ಗೋವಾಂಗನೆಯರಿಕ್ಕೆಲಕೆ
ಪರಮಪುರುಷನ ಪುಣ್ಯ ಚರಿತವ
ನಿರದೆ ವಾಡುತ್ತಿರಲು ಕೇಳುತ
ಕರಗುತಿರ್ದರು ತಾಯಿಗಳು ಪುತ್ರಾನುರಾಗದಲಿ ೭

ತಮತಮಗೆ ಬಲ ಕೃಷ್ಣರಾನನ
ಕಮಲವನು ನೋಡುತ್ತ ಗೋಪಿಯ
ರಮಲ ಲೀಲಾಚರಿತ ಗೀತಂಗಳನು ಕೇಳುತ್ತ
ಅಮಮ ಮಱೆದರು ಬಹಳ ಮಾರ್ಗ
ಶ್ರಮವನದನನವರತ ನಮಗೀ
ಗಮನವೇ ಲೇಸೆನುತಲಿರ್ದುದು ಸಕಲ ಜನನಿವಹ ೮

ಹೊಕ್ಕರಾವೃಂದಾವನದ ಸಿರಿ
ಸಿಕ್ಕಿಸಿತು ಕಣುಮನವಹರುಷವ
ಸೊಕ್ಕಿಸಿತು ನೊಗಯಿಸಿತು ತರುಗಿರಿತೃಣಜಲ ಸಮೃದ್ಧಿಯಲಿ
ಜಕ್ಕುಲಿಸಿದುದು ಝುಳವನರ್ತಿಯು
ನಕ್ಕುಳಿಸಿ ಬಲಕೃಷ್ಣರಿಂನಿರ
ತಕ್ಕುದೀವನವೆನಿಸಿಕೊಂಡುದನನ್ಯ ವಿಭವದಲಿ ೯

ಸಿದ್ಧಿಕರವೀ ವನವೆನುತ ಹರು
ಷೋದ್ಧತರು ಮಾಡಿದರು ವಸತಿಯ
ನರ್ಧಚಂದ್ರಾಕಾರದಲಿ ಗೋಧನ ಮನುಷ್ಯರಿಗೆ
ವೃದ್ಧ ಬಾಲ ವಧೂಜನರು ಸಹಿ
ತಧ್ವಗಮನ ಶ್ರಮವನುಳಿದು ನಿ
ಬದ್ಧವೆನೆ ಮನೆಮಾಡಿದರು ವೃಂದಾವನಾಂತದಲಿ ೧೦

ಜನಪ ಕೇಳಾ ಬಹಳ ವೃಂದಾ
ವನದಸಿರಿಯನು ಮೆಱೆವ ಗೋವ
ರ್ಧನದ ಗಿರಿ ಪ್ರಾಂತವನು ಯಮುನಾಪುಳಿನ ಲಕ್ಷ್ಮಿಯನು
ದನುಜಹರ ಬಲರಾಮರೀಕ್ಷಿಸಿ
ಮನದಲಧಿಕ ಪ್ರೀತಿಯನು ತಾ
ಳ್ವನುಪಮರು ರಂಜಿಸಿದರುನ್ನತ ಬಾಲಕೇಳಿಯಲಿ ೧೧

ನೆಱೆಚತುರ್ದಶ ಭುವನಕರ್ತುಗ
ಳಱಿಯದರ್ಭಕರಂತೆ ಕಾವುತ
ಕಱುಗಳನು ಕಱುಗಾಹಿತನದಂದದಲಿ ಮೆಱೆವುತ್ತ
ಅಱಿವಹೊಲನೊಳಗೊಯ್ಯನೊಯ್ಯನೆ
ಕಱುಗಳನು ಮೇಯಿಸುತ ಬಪ್ಪರು
ಮರಳಿ ಮಧ್ಯಾಹ್ನಕ್ಕೆ ಗೋವಳರೊಡನೆ ಗೋಕುಲಕೆ ೧೨

ಒಂದು ದಿನ ನೃಪ ಕೇಳು ನೆರೆದಾ
ನಂದ ಗೋಪಾದಿಗಳು ತಮ್ಮೊಳ
ಗಿಂದಯಾಗೋದ್ಯೋಗದಲಿ ಸಂಭ್ರಮಿಸುತಿರೆ ಕಂಡು
ಎಂದನಖಿಳಾಧ್ಯಕ್ಷನಱಿಯದ
ನಂದದಲಿ ವೃತ್ತಾಂತವನು ಗೋ
ವಿಂದನಱಿವಿಚ್ಛೆಯಲಿ ನಗುತಲಿ ಗೋಪ ವೃದ್ಧರಿಗೆ ೧೩

ಹೇಳಿ ನಿಮಗಿಂದೇನು ಸಂಭ್ರಮ
ಕೇಳಲಾಗದೆ ತಾನಿದನು ಮುಖ
ದೇಳಿಗೆಗೆ ಫಲವೇನು ದೇವತೆಯಾರು ವಿಧಿಯೇನು
ಮೂಲ ಕಾರಣವಾವುದೇತಕೆ
ಮೇಳವಿಸಿದಿರಿ ಸಾಧ್ಯಸಾಧನ
ಜಾಲವಿವರವಿವೇಕವನು ವಿಸ್ತರಿಪುದೆನಗೆಂದ ೧೪

ಎಂದಡೆಂದನು ನಂದನಾ ನಿಜ
ನಂದನಂಗೆಲೆ ಮಗನೆ ಮುಖಕೆ ಪು
ರಂದರನೆಪತಿ ವೃಷ್ಟಿಫಲವೀಮುಖಕೆ ವೃಷ್ಟಿಯಲಿ
ಸಂದ ಸಚರಾಚರಕೆ ಜೀವನ
ವೆಂದು ವೇದಪುರಾಣಮತವೆಲೆ
ತಂದೆ ತಾತ್ಪರ್ಯವನು ತಿಳಿಯದಡಜ್ಞತುಕೊಳ್ಳೆಂದ ೧೫

ಲೌಕಿಕವೊ ವೈದಿಕವೊ ನಿಮ್ಮ ವಿ
ವೇಕನಾವುದು ಮಾಳ್ಪೊಡಿಂ ದೀ
ಪಾಕಶಾಸನಮುಖವಿದಾರಿಗೆ ವಿಹಿತ ಧನಕ್ಷಯವ
ಏಕೆ ಮಾಡುವೆ ತನ್ನನುಡಿ ಕಿವಿ
ಗೋಕರಿಸಿದನುಕೂಲರಹಡ
ವ್ಯಾಕುಲರು ನೀವಿದನು ಮಾಡುವುದುಚಿತವಲ್ಲೆಂದ ೧೬

ರಾಗಲೋಭದಲಿಂದು ಪೂರ್ವಕು
ಲಾಗತಕ್ರಮವಿದನು ಸುರಪನ
ಯಾಗವನು ಮಾಡದಡೆ ದೇವವಿರೋಧ ಗತಿ ನಮಗೆ
ಆಗದಿಹುದೈ ಮಗನೆ ನಿನ್ನಮ
ನೋಗತವಿದೇನೆನಲು ಕರುಣಾ
ಸಾಗರನು ತಾ ಮಗುಳೆ ನುಡಿದನು ತಂದೆಗುತ್ತರವ ೧೭

ನಮಗೆ ಮಾಳ್ಪಡೆ ದೈವವೀ ಗಿರಿ
ನಿವಹವೀ ವನರಾಜಿ ತೃಣಜಲ
ವಿವಿಧ ಕಂದ ಫಲಪ್ರಸೂನಪ್ರಕರದಾನವಲಿ
ಭವನವಾದುದಱಿಂದ ಮಾಳ್ಪುದು
ಸವನವನು ಗೋವರ್ಧನಾದ್ರಿಗೆ
ದಿವಿಜಪತಿಗೇನೆಂದು ಮಾಳ್ಪುದು ಮಖವನಿದನೆಂದ ೧೮

ಈವುದುಪಹಾರವನು ಧರಣೀ
ದೇವರಿಗೆ ಜೀವನವೆನಿಪ್ಪೀ
ಗೋವುಗಳಿಗಾವಾಸವಹ ಗೋವರ್ಧನಾಚಳಕೆ
ದೇವರಾಜ ಮಖೋಕ್ತ ಸಂಭಾ
ರಾವಳಿಗಳೀ ಮಖಕೆ ನೆಱೆ ಸಂ
ಭಾವಿಸಲಿ ಸುರರಾಜನಿಂದಹ ಸಿದ್ಧಿಯೇನೆಂದ ೧೯

ಮನೆಕೆಬಹಡಿದು ತನ್ನಮತ ನಿ
ಮ್ಮನಿಬರಿಗೆ ಹಿತವೆನಗೆ ಗೋದ್ವಿಜ
ಜನಕೆ ಪರಮಪ್ರೀತಿಕರವೀಮಖವಿದೆಂದೆನಲು
ತನತನಗೆ ಬರೆಲೇಸು ಕಾರ್ಯ ವಿ
ದೆನುತ ಕೃಷ್ಣನ ವಚನವನು ಕೇ
ಳ್ದನಿಬರೊಬ್ಬುದ್ಧಿಯಲಿತೊಡಗಿದರಾ ಮಹಾಮಖವ ೨೦

ಹೂಡಿದರು ಬಂಡಿಗಳನೊಪ್ಪಿರೆ
ಮಾಡಿದಡಿಗೆಯನಾ ಮಹಾನ್ನವ
ಕೂಡೆ ತುಂಬಿಸಿ ಘೃತ ದಧಿಕ್ಷೀರೋದಸಂಗಳನು
ಜೋಡಿಸಿದರಾ ಗಿರಿಗೆ ಮಖವನು
ಮಾಡಿಸೀ ದ್ವಿಜತುಷ್ಟಿಯನು ಹರಿ
ಗೂಡಿ ಬಲವಂದೆಱಗಿದನು ಬಲಸಹಿತ ಗಿರಿವರಗೆ ೨೧

ಹರೆ ಕೊಳಲು ಕೊಂಬುಗಳು ಮೆಱೆವ
ಬ್ಬರದ ಬಿಱುದಿನ ಕಹಳೆಗಳ ಗಾ
ವರದ ರವಗಳ ಗಿರಿಗೆ ಪೂಜೆಯ ಮಾಡಿ ಬಲಿಗೊಟ್ಟು
ಕರವಮುಗಿಯಲು ಮುಂದೆರೂಪಾಂ
ತರದಲಾ ಗೋವಳರು ನೋಡಲು
ಗಿರಿಶಿರದಲಸುರಾರಿ ಕುಳ್ಳಿರ್ದುಂಡನಾ ಬಲಿಯ ೨೨

ಇತ್ತನೋಡಿರೆಶೈಲರಾಜನ
ಚಿತ್ತದೊಲವನು ಪರಮಕಾರುಣಿ
ಕೋತ್ತಮನಲಾ ಕೊಟ್ಟ ಬಲಿಯನು ಕಂಗಳಿದಿರಿನಲಿ
ತುತ್ತುಗೊಳುತೈದಾನೆ ಮರ್ಝುವಲ
ಶತ್ರುವಿನ ಪರಿಯಲ್ಲ ನೆಱೆ ಕೃತ
ಕೃತ್ಯರಾದೆವು ಪೊಡಮಡುವುದೆಂದನು ಮುರಧ್ವಂಸಿ ೨೩

ಎಂದು ಗೋಪರು ಸಕಲ ಗೋಧನ
ವೃಂದಸಹಿತಾ ಪರ್ವತವ ಬಲ
ವಂದು ಶಿಶುಪಶು ವೃದ್ಧವನಿತಾ ಕ್ಷೇಮವನು ನಮಗೆ
ತಂದೆ ಕರುಣಿಸೆನುತ್ತ ಸಲೆ ಗೋ
ವಿಂದನಂದಾ ತನಗೆ ತಾನೇ
ವಂದಿಸುತ ಮೈಯಿಕ್ಕಿದನು ಗಿರಿರಾಜನಿದಿರಿನಲಿ ೨೪

ಅತ್ತಲಮರಾಧೀಶನುದರದ
ಲೆತ್ತಿದುದು ಘನತಾಪ ಮನದಲಿ
ಹೊತ್ತಿದುದು ತನು ಸಾವಿರಾಲಿಗಳುರಿಗಳನು ಕೆದಱೆ
ಕೆತ್ತಿದುವು ಮೀಸೆಗಳು ಹಲುಮೊಱೆ
ವೃತ್ತಗೋಪಪ್ರಳಯ ಸಮಯದ
ಕೃತ್ತಿವಾಸನ ಪೋಲುತಳೆದನು ರೌದ್ರಮಯ ರಸವ ೨೫

ಅಕ್ಕಟಕಟಾ ನೋಡಿ ಗೋಪರ
ಸೊಕ್ಕನಿದನೇನೆಂಬೆನೆನ್ನನು
ಧಿಕ್ಕರಿಸಿ ಗಿರಿಗಿತ್ತರೇ ತನ್ನಡಿಗೆ ಪೂಜೆಯನು
ಹೆಕ್ಕಳಿಸಿ ಬಲಕೃಷ್ಣರೆಂಬಾ
ಮಕ್ಕಳಾಟಿಕೆ ಮಾರಿಯಾಯಿ
ತ್ತಿಕ್ಕುವುದೆ ನಿಜಪೂಜೆ ಪರ್ವತಗೆಂದು ಖತಿಗೊಂಡ ೨೬

ಸಂಕಲೆಯ ಕಡಿ ಪುಷ್ಕಳನ ಹೊಱ
ಯಿಂಕೆ ಬಿಡು ಸಂವರ್ತನನು ಬಲ
ಪಂಕದಲಿ ತಾನಿಹೆನು ಕರೆಕರೆ ಮೇಘನಿಕರವನು
ಲೆಂಕರೊಡನೊಡೆಯಂಗೆ ಸವನಿಸಿ
ತ್ತಂಕ ನಾಚಿಕೆಯಾಯಿತೆನುತವೆ
ಹೂಂಕರಿಸುತಮರೇಂದ್ರನಾನೆಯನೇಱ ಹೊಱವಂಟ ೨೭

ಆಡಿದುವು ಮಿಂಚುಗಳು ನಭದಲಿ
ಕೂಡೆ ಕತ್ತಲಿಸಿತ್ತು ಕಲ್ಪದ
ಕೇಡಿನಂದದವೋಲು ಗೋಕುಲದೆಂಟು ದಿಕ್ಕಿನಲಿ
ಝಾಡಿಸಿದುವಭ್ರದಲಿ ಗಾಳಿಗ
ಳೀಡಿಱದುದೋರಂತೆ ಸಲೆಹೊಡೆ
ದಾಡಿದುವು ಬಱಸಿಡಿಲು ಸುರಿದುದು ವೃಷ್ಟಿ ಭೂತಳಕೆ ೨೮

ನೆಟ್ಟಕಂಬದವೋಲು ಧಾರಾ
ವೃಷ್ಟಿ ಕೀಲಿಸಿತಿಳೆಯನಭ್ರವ
ನಟ್ಟಳಿಸಿ ಕೀಳುವ ತೆರನಾಗಿ ಬಳ್ಳಿ ಮರಗಳನು
ನಿಟ್ಟಿಸುವಡಱದಾಯ್ತು ಮಿಗೆ ಕಂ
ಗೆಟ್ಟು ಗೋಕುಲವ್ರೈದೆ ನೀರೊಳ
ಗಿಟ್ಟವೃತ್ತಿಕೆಯಂತೆ ನೆನೆದುದು ನಿಮಿಷಮಾತ್ರದಲಿ ೨೯

ಸಿಡಿಲು ಮಳೆ ಗಾಳಿಗಳ ಬಾಧೆಗೆ
ನೆಡೆದು ಶಿಶುಪಶು ವೃದ್ಧವನಿತೆಯು
ರೊಡಲು ಕಂಪಿಸಿ ಬೆಗಡುಗೊಂಡೋಡಿದರು ಮನೆಗಳಲಿ
ಒಡೆಯರಾರೆಮಗಿನ್ನು ಕೃಷ್ಣನೆ
ಕೆಡಿಸಿದನು ಕೈಗಾಯಹೇಳೆನು
ತಡಿಗಡಿಗೆ ಗೋಳಿಡಲು ಮಳೆ ಮುದ್ರಿಸಿತು ಗೋಕುಲವ ೩೦

ಎತ್ತಣದು ಬಾಯ್ಬಿಡದಿರೆಲವೊ ವಿ
ಪತ್ತು ನಮಗೀ ಕೃಷ್ಣನಿರಲಿದ
ತುತ್ತುಗೊಳ್ಳನೆ ಕಾಳುರಿಗೆ ಘನವೈ ಜಲಾಸಾರ
ಉತ್ತಮನನಾಶ್ರಯಿಸಿ ಬನ್ನಿಯೆ
ನುತ್ತ ಗೋಕುಲ ಜನ ಜಲವನೀ
ಸುತ್ತ ಬಂದುದು ಬಳಲುತವೆ ಗೋವಿಂದನಿದ್ದೆಡೆಗೆ ೩೧

ಕಱುಗಳನು ಮುಂದಿಟ್ಟು ಮೋಱೆಯ
ಮುಱುಹಿ ಕೊರಳೊಳಗಿಕ್ಕಿ ಹಲುಗಿಱಿ
ಗಿಱಿದು ಬಾಲವನೆತ್ತಿ ಬಹಳಾಸಾರದಲಿ ನಡುಗಿ
ಅಱಸುತಚ್ಯುತನಂಘ್ರಿಕಮಲದ
ಮಱೆಯಹೊಕ್ಕವು ಕಾಲಕರ್ಮ್ಮಂ
ತರದವೋಲಳವಳಿದುತುಱುವಿಂಡುಗಳು ಸಂದಣಿಸಿ ೩೨

ಅಂಜದಿರಿ ಗೋವಳರು ಗೋಪಿಯ
ರಂಜದಿರಿ ಗೋವುಗಳಿಗಾನಿಹೆ
ನಂಜಬೇಡಮರೇಂದ್ರನಾಟೋಪಕ್ಕೆ ಬೆದಱದಿರಿ
ಅಂಜುವಂಗಭಯವನು ಗಿರಿವರ
ನಂಜದಿರಿ ನಿಮಗೀವನೆನುತವೆ
ಕಂಜನಾಭನು ಕರವನೆಗಹಿದನಖಿಳಪರಿಜನಕೆ ೩೩

ಎಡದಕೈಯನು ನೀಡಿ ಗಿರಿಯನು
ತುಡುಕಿ ನೆಗಹಿದನೇನನೆಂಬೆನು
ಕೊಡೆಯನೆಗಹುವವೋಲು ಖಗಮೃಗನಿಕರಗಳ ಸಹಿತ
ಹಿಡಿದು ಗೋಪರಿಗೆಂದನೆಲ್ಲರು
ತಡೆಯದಿತ್ತಲು ಬನ್ನಿ ನೀ ವೊ
ಗ್ಗೊಡೆಯದೆಲ್ಲರು ಶಿಶುಪಶು ಪ್ರಿಯಬಾಂಧವರು ಸಹಿತ ೩೪

ಬೀಳದೀಗಿರಿ ತನ್ನ ಕೈಯಿಂ
ದೇಳಿ ತಡವನು ಮಾಡದೆಲ್ಲರು
ಶೈಲವಾಸದಲಿಹುದು ಮಳೆ ತೆಗೆವನ್ನಗೆಂದೆನಲು
ಕೇಳುತವೆ ಗೋವಳರು ಕಡು ಹೀ
ಹಾಳಿಮಿಗೆ ಹರುಷದಲಿ ತಂತ
ಮ್ಮಾಲಯವ ಹೊಗುವಂತೆ ಹೊಕ್ಕರು ಸಕಲ ಜನಸಹಿತ ೩೫

ಹೊಕ್ಕು ಕಱುತುಱು ಸರಕುಗಳ ಸಹಿ
ತಿಕ್ಕೆಹಕ್ಕೆಯ ಮಾಡಿ ಗಿರಿಯಲಿ
ಶಕ್ರನನು ನಗುವಂತೆ ನಿಶ್ಚಿಂತೆಯಲಿ ಗೋವಳರು
ಇಕ್ಕೆಲದ ಮೇಘಾಳಿಸಿಡಿಲನು
ಮಿಕ್ಕು ಹರಿಮೂರ್ತಿಯನು ತಾವೆವೆ
ಯಿಕ್ಕ ದೀಕ್ಷಿಸುತಿರ್ದ್ದರಿತರದ ಬಳಕೆಯನು ಮಱೆದು ೩೬

ಹಸಿವು ತೃಷೆಗಳ ಮಱೆದುದಾಜನ
ವಿಸರ ಕೃಷ್ಣನ ಮೂರ್ತಿಸುಧೆಯನು
ಶಶಿಮುಖಿಯರೊಪ್ಪಿರಲು ಪಾಡುತ ಕೃಷ್ಣಗೀತವನು
ಒಸೆದು ಕಣ್ಣಿನ ಕುಡಿತೆಯಲಿ ಸೇ
ವಿಸುತ ಪುಳಕಾಭಿನ್ನ ನೇತ್ರ
ಪ್ರಸರದಲಿ ಸುಖವೆನಿಸಿದರು ನಿತ್ಯಾತ್ಮಭಾವದಲಿ ೩೭

ಕೇಳು ನೃಪ ಕಮಲಾಕ್ಷನರ್ಭಕ
ಲೀಲೆಯನು ಸುರಪತಿಯ ಗರ್ವವ
ಕೀಳುವಂದದಿ ಕಿತ್ತು ವಾಮಭುಜಾಗ್ರದಲಿ ಗಿರಿಯ
ಏಳು ದಿನಪರಿಯಂತ ಚಲಿಸದೆ
ಗಾಳಿ ಮಳೆ ಸಿಡಿಲುಗಳ ಭಯದಲಿ
ಪಾಲಿಸಿದನಾತ್ಮಾಶ್ರಿತರನಂದಖಿಳಗೋಕುಲವ ೩೮

ಅತ್ತಲಮರಾಧೀಶ್ವರನ ತನು
ಹೊತ್ತಿಹೊಗೆದುದು ಮುಸುಡು ಮಾಡಿದ
ಕೃತ್ಯದನುತಾಪದಲಿ ಸುಯ್ದುಳಲುತ್ತ ಮನದೊಳಗೆ
ಎತ್ತಣದು ತನಗೀ ಮತಿಭ್ರಮೆ
ಕೆತ್ತುದಱಿವಿನಪಥವೆನುತ್ತ ನಿ
ರಸ್ತಮಾನಸಭಂಗನಾದನು ನಿಮಿಷಮಾತ್ರದಲಿ ೩೯

ಪರಿಮಿತದಲೈತಂದು ಕೃಷ್ಣನ
ಚರಣದಲಿ ಪೊಡವಂಟು ನತಮಣಿ
ಕಿರಣ ಕೀರ್ತಿನಖೇಂದು ಮಂಡಿತ ಮೌಳಿಯೆಂದೆನಿಸಿ
ಕರಯುಗವ ಮುಗಿದೆದ್ದು ಲಜ್ಜಿಸಿ
ಶಿರವೆಱಗಿ ವಿಹಿತಾಪರಾಧ
ಸ್ಮರಣೆ ಮನದಲಿ ಮೂರ್ತಿಸಲು ಸುರನಾಥನಿಂತೆಂದ ೪೦

ಒಡೆಯ ನೀನೆಮಗೆಲ್ಲರಿಗೆ ನಿ
ಮ್ಮಡಿಯ ಸೇವೆಯ ಮಾಳ್ಪಸಲುಗೆಯ
ಪಡೆನೆವೆಂದುಬ್ಬರಿಸಿ ಪೃಥುಗೀಶಾಭಿಮಾನದಲಿ
ಒಡೆಯನನು ಕಂಗಾಣದೀ ಪರಿ
ಕೆಡುವ ಪಾಪಿಗಳಾವು ದೇವರ
ಬಡಿಗೆಗಲ್ಲದೆ ಬಾಗಲಱಿಯೆವು ಬಿಂಕವೆಮಗೆಂದ ೪೧

ಎಂದು ಚರಣದಲೆಱಗಿ ಕರುಣಿಸು
ತಂದೆ ಕೃಷ್ಣ ಕೃಪಾನಿಧಿಯೆ ಗೋ
ವಿಂದ ಗೋಕುಲ ರಕ್ಷಕನೆ [1]ತ್ರಿಮದಾಂಧ[1] ಶಿಕ್ಷಕನೆ
ಇಂದಿರಾವಲ್ಲಭನೆ ದೇವ ಮು
ಕುಂದ ರಕ್ಷಿಸೆನುತ್ತಿರಲು ನಗು
ತೆಂದನಸುರಾರಾತಿ ಘನಗಂಭೀರವಚನದಲಿ ೪೨

ಮತ್ತರಿಂಗೆನ್ನಲ್ಲಿ ಮತಿ ನಿ
ವರ್ತಿಸದು ತನಗಾ ಮದಾಂಧರ
ಮೊತ್ತದಲಿ ಕೃಪೆನೇರಲಱಿಯದು ಕೇಳು ನಿಜಮತವ
ಕತ್ತಲೆಗೆ ಬೆಳಗಿಂಗೆ ಸೇರುವೆ
ಯೆತ್ತಣದು ನೀನಂಜದಿರು ನಿಜ
ಭೃತ್ಯನಲ್ಲಾ ಯೆನುತ ವೈದಡವಿದನು ಸುರಪತಿಯ ೪೩

ಹೋಗುಮಗನೆ ಮದಾಂಧತನಕೊಳ
ಗಾಗದೆನ್ನಾಜ್ಞೆಯನು ಮಾಡುವ
ನಾಗಿ ನಿನ್ನಧಿಕಾರದಲಿ ನೀನಿಹುದು ಗರ್ವಿಸದೆ
ಲೋಗರಂತಿರೆ ವಿಷಯನಿಃಸ್ಪೃಹ
ನಾಗಿ ವಿಶ್ವಾಸವನು ಮಾಡದೆ
ಯೋಗಸುಖಸಂಪನ್ನನಾಗಿಹುದೆನುತ ನೇಮಿಸಿದ ೪೪

ಬಂದನಮರಾಸುರನತಾಂಘ್ರಿ
ದ್ವಂದ್ವನಚ್ಯುತ ಗೋತ್ರ ಪರಮಾ
ನಂದ ನಿಧಿ ಪರಹಿತ ಸಮಾಹಿತಮೂರ್ತಿನುತಕೀರ್ತಿ
ಇಂದಿರಾಪತಿ ಭಕ್ತಜನ ನಿಜ
ಮಂದಿರನು ವೈಷ್ಣವ ಶಿರೋಮಣಿ
ವಂದ್ಯಚರಣರ ದೇವನಾ ನಾರದನು ಮಧುಪುರಿಗೆ ೪೫

[1] ತಿಮಿರಾಂಧ[1] (ಗ)

ಬಂದಡೋಲಗದೆಡೆಗೆ ಭೋಜನೃ
ಪೇಂದ್ರನಿಳಿದುತ್ತಮ ವರಾಸನ
ದಿಂದಿದಿರುಗೊಂಡುಚಿತವಹ ಸತ್ಕಾರವನು ಮಾಡಿ
ವಂದಿಸುತ್ತಿರೆ ಮಗನೆ ಸುಖಿಯಾ
ಗೆಂದು ಮುನಿತಲೆದಡವಿ ನಿನಗಾ
ನಂದವೇ ಮುಖಲಕ್ಷ್ಮಿಮುನಿದಂತಿರ್ದುದೇನೆಂದ ೪೬

ಏನನೆಂಬೆನು ಮುನಿಪ ಮನದ
ಗ್ಲಾನಿಯನು ತನ್ನೊಂದು ಪೈಕದ
ಹಾನಿಯನು ಕೇಳುವರೆ ಕರ್ಣವ್ಯಥೆಯಲಾ ನಿಮಗೆ
ಮಾನನಿಧಿ ಚಿತ್ತವಿಸು ತಂಗಿಯ
ಸೂನುವಿನ ದೆಸೆಯಿಂದ ತನಗವ
ಸಾನವೆಂದಂದಿಂದ ಮನಕೆ ವಿಷಾದವಾಯ್ತೆಂದ ೪೭

ತಂಗಿಗೊಬ್ಬಳು ಮಗಳು ಕೊಲಲಾ
ನಂಗವಿಸಿದಡೆ ಹಾರಿದಳು ಗಗ
ನಾಂಗಣಕೆ ಸಾರಿದಳು ಮತ್ತವಳೆನಗೆ ಧರಣಿಯಲಿ
ಅಂಗವಿಡಿದಿಹನೆಂದು ತನ್ನೊಡ
ಲಿಂಗೆ ತಾಪವನಿತ್ತು ಹೋದಳು
ಭಂಗಿಸಿತಲಾ ಬಯಲನುಡಿ ತಾನೇವೆನಿದಕೆಂದ ೪೮

ವಸುಧೆಯೊಳಗಿಹನೈಸಲೇಯೆಂ
ದಸುರೆಹೋದಳು ಹೋದಳತ್ತಲೆ
ಶಿಶುವಧೆಗೆ ಬಕ ವತ್ಸ ಧೇನುಕರೆಂಬ ಪಟುಭಟರ
ಅಸುವನಾರೋಕೊಂಡವರು ಕೇ
ಳಿಸದು ಮಗುಳಾವಾರ್ತೆ ನಿಮ್ಮಡಿ
ಬೆಸಸಬೇಹುದು ಬಲ್ಲರೆಂದನು ಮುನಿಪತಿಗೆ ಕಂಸ ೪೯

ಎನಲು ಸಕ್ಕನು ಮುನಿಪನಾ ಕಂ
ಸನ ನುಡಿಯನಾಲಿಸುತ ಕೇಳೆಲೆ
ನಿನಗೆ ಸರಿಯೇ ವಿಷ್ಣು ವೀರರದಾರು ನಿನ್ನದಿರ
ಅನಿಮಿಷರಿಗಲಗಣ ಸುನಿನ್ನಾ
ನನದಲಕ್ಷ್ಮಿಗೆ ಮಾಂದ್ಯವೇಕಿ
ಲ್ಲಿನಿತು ಭಯವಾರಿಂಗೆ ನೀನಿದಕಂಜಲೇಕೆಂದ ೫೦

ಪೇಳುವೆನು ಬಲ್ಲಂದದಲಿ ನಿ
ನ್ನಾಳುಗಳು ಮಡಿದಂದವನು ಗೋ
ಪಾಲರಿಬ್ಬರು ಬೆಳವುತ್ತೈದರೆ ನಂದಗೋಕುಲದ
ಬಾಲಕರೊಳತಿ ಚೆಲುವರಧಿಕ ವಿ
ಶಾಲಭುಜಬಲರವರು ಲಕ್ಷ್ಮೀ
ಲೋಲನಂಶಜರೆಂಬರೆಲೆ ಭೂಪಾಲ ಕೇಳೆಂದ ೫೧

ದೇವಕಾರ್ಯವಮಾಡಲೋಸುಗ
ದೇವಕಿಯ ಜಠರದಲಿ ಬರೆ ವಸು
ದೇವನೊಯ್ದಿರಿಸಿದನು ಕೇಳೆಲೆ ಕಂಸ ನಿಜಸುತನ
ಗೋವಳರೊಳಾರಱಿಯದಂತಿರು
ಳಾ ವಿಗಡ ವಿಷ್ಣುವನು ನಿನ್ನೀ
ಜೀವಹರಣನು ಬೆಳವುತ್ತೈದನೆ ಗೋಕುಲದಲೆಂದ ೫೨

ಭೂಮಿಭಾರಾಯಿತ ನೃಪಾನ್ವಯ
ಧೂಮಕೇತುಗಳಾಗಿ ಧರೆಯಲಿ
ರಾಮಕೃಷ್ಣಾಹ್ವಯರು ಬೆಳೆವುತ್ತೈದರದಱಿಂದ
ಈ ಮಹಾದುರ್ಧರುಷದೈತ್ಯ
ಸ್ತೋಮವಳಿದುದು ಕಂಸಕೇಳು
ದ್ದಾಮ ಬಾಲಕ್ರೀಡೆಯಿಂದವೆ ಕೊಂದರವರೆಂದ ೫೩

ಮಗನೆ ಕೇಳೈಕಂಸ ನಂದನ
ಮಗಳು ಚಂಡಿಕೆ ಕೃಷ್ಣ [1]ಶೌರಿಗೆ
ಮಗನು ತಾನಾರಾಮನಾ ರೋಹಿಣಿಗೆ ಮಗನಿಂತು[1]
ಮುಗುದನಾಗದಿರಿನ್ನು ಕಾರ್ಯವ
ಬಗೆವುದೆನೆ ಕೇಳುತ್ತ ಖಳನೆ
ದ್ದೊಗುಮಿಗೆಯ ಕೋಪದಲಿ ಕೊಂಡನು ಸೆಳೆದು ಕೂರಸಿಯ ೫೪
ಕಾಲಭೈರವನಂತೆ ರೋಷ ಕ
ರಾಳಮುಖನೊದೆದವಸಿಯನು ಕ
ಣ್ಣಾಲಿಗಳು ಕಿಡಿಯಿಟ್ಟು ಹೂಂಕರಿಸುತ್ತ ನಿಂದಿರ್ದು
ಸೀಳಿಬಿಡಿ ವಸುದೇವನನು ಭೂ
ತಾಳಿಗಿಕ್ಕುವೆ ಬಲಿಯನೀಕ್ಷಣ
ವೇಳೆನುತ ಖಂಡೆಯವ ಜಡಿದನು ಹಿಡಿದು ಮುಂದಲೆಯ ೫೫
ಅಕ್ಕಟೀನೇನೆನುತ ತಾನಿನಿ
ತಕ್ಕೆ ಬಂದೆನೆ ಪಾಪಿ ಕೊಲ್ಲದಿ
ರಕ್ಕುಳಿಸಿಕೋ ಕೋಪವನು ಕಾರ್ಯಾರ್ಥಸಂಗತಿಯ
ಲೆಕ್ಕಿಸದೆ ನೀ ಕೊಂದಡವದಿರು
ಸಿಕ್ಕುವರೆ ಬಾಲಕರು ನಿನ್ನದು
ಮಕ್ಕಳಾಟಿಕೆ ಕಂಸ ಕಳವಳಿಸದಿರು ನೀನೆಂದ ೫೬
ಅರಿದು ನಿನಗೀತನನು ಕೊಲುವರೆ
ಮರುಳೆ ತಲೆಯಿರೆ ಬಾಲವನು ಕ
ತ್ತರಿಸುವರೆ ಕಾಳೋರಗನ ಕಲಿತನವ ತೋಱುವರೆ
ಕರೆಸು ನಿನ್ನಳಿಯಂದರನು ನಿಜ
ಪುರಕೆ ನೆವದಲಿ ಹಣ್ಣುವುದು ಬಳಿ
ಕರಸ ಮನದೊಳಗಿದ್ದ ಕಾರ್ಯವನೆಂದನಾಮುನಿಪ ೫೭

1. [1]ನಾಶೌ। ರಿಗೆ ಜನಿಸಿದನು ರಾಮನಾರೋಹಿಣಿಗೆಮಗನಿನ್ನು[1] (ಖ)

ನೂಕುಸಂಕಲೆಗಳಿಗೆ ಕಳ್ಳನ
ಸಾಕಿವನು ನಿಜಪುತ್ರ ಮರಣದ
ಶೋಕವನು ಭೋಗಿಸಲಿ ಹೋಗಲಿಕೂಡೆ ಬಳಿಕೆನುತ
ಆ ಕುಮತಿ ಕಂಸಾವನೀಶ ನ
ನೇಕಪರಿಯಲಿ ಜಱೆದು ಸುಜನಾ
ನೀಕ ಮಱುಗಲು ಶೌರಿದೇವಕಿಯರನು ಬಂಧಿಸಿದ ೫೮

ದುರುಳನಾಗಳೆ ಕೇಶಿಯೆಂಬನ
ಕರೆದು ಬೆಸಸಿದನರಿತಮೋಭಾ
ಸ್ಕರನೆ ವೀರಶಿರೋಮಣಿಯೆ ನೀ ಹೋಗು ಗೋಕುಲಕೆ
ಭರದಲೆನ್ನ ವಿರೋಧಿಗಳ ಸಂ
ಹರಿಸಿ ಬಾರಾ ರಾಮಕೃಷ್ಣರ
ತರಿಸುವೆನು ಗೋವಳರ ಸಿರಿಯನು ಬಳಿಕ ತಾನೆಂದ ೫೯

ಕಳುಹಿ ಖಳನನು ದುಷ್ಟಮತಿ ಗೋ
ಕುಲಕೆ ಬಳಿಕಾ ಮಲ್ಲರೊಳಗ
ಗ್ಗಳಿಯರಹ ಚಾಣೂರಮುಷ್ಟಿಕ [1]ಶಲನ ಕೌಶಲನ[1]
ಬಲವದಾರೋಹಕರ ರಣಕತಿ
ಬಲರೆನಿಪ ಮಾವಂತರನು ಕರೆ
ದಳಲುಮಿಗಲಿಂತೆಂದನೋಲಗದೊಳಗೆ ಕುಳ್ಳಿರ್ದು ೬೦

ಕೇಳಿದಿರೆ ನೀವೊಂದು ಕಥೆಯನು
ಹೇಳುವರೆ ನಾಚುವುದು ಮನ ಗೋ
ವಾಲರಿಬ್ಬರು ನಂದಗೋಕುಲದೊಳಗೆ ಗಡ ತನ್ನ
ಆಳುಗಳ ಕೊಂದವರು ಕಲಿಗಳು
ಕಾಳಗಕೆ ಗಡ ತನಗೆ ಮುನಿಪತಿ
ಹೇಳಿದನು ವಸುದೇವಸುತರವರೆಂದು ಬಾಲಕರ ೬೧

[1]ಶಲಭ ಕೌಸಲರ[1] (ಖ)

ಕೇಶಿಯಾಹವದೊಳಗೆ ಹಗೆಗಳು
ಘಾಸಿಯಾಗದೆ ಮಾಣದುಳಿದರೆ
ಸಾಸಿಗರಕರೆಸುವೆನು ಕೊಲುವುದು ನೀವು ಬರಲವರ
ಈ ಸಮಜಂಸ ಮಲ್ಲಸಭೆಯು
ಭ್ಯಾಸಮುಖದಲಿ ಮಲ್ಲರಂಗಳ
ದೇಶದಲಿ ಮಂಚಂಗಳಿಕ್ಕಲಿ ನೋಟಕರಿಗೆಂದ ೬೨

ಕುಳ್ಳಿರಲು ಮಂಚಂಗಳಲಿ ಜನ
ವೆಲ್ಲ ನೋಡಲಿ ಪೌರುಷವ ನೆಲೆ
ಮಲ್ಲರಿರ ಮಾವಂತ ಕೇಳಾ ಹಸ್ತಿಮಲ್ಲನನು
ಬಲ್ಲಿದರ ಸಮ್ಮುಖಕೆ ಬಿಡಿ ಬಳಿ
ಕಲ್ಲಿ ನಿರ್ಣಯವಾಗದಿರ್ದ್ದರೆ
ಮಲ್ಲರಲಿ ನಿರ್ಣಯಿಸಬಹುದೆನಲಂಜುತಿಂತೆಂದ ೬೩

ಕೊಂದೆನೆಂದಱಿ ಖಳನ ಹುಗದಿ
ಲ್ಲಿಂದ ಮುನ್ನವೆ ಬಾಗಿಲೊಳಗಾ
ನಂದಗೋಪನ ಮಕ್ಕಳನು ಸಂದೇಹವೇಕಿದಕೆ
ಒಂದು ಬಿನ್ನಹ ನಿಮ್ಮಡಿಗಳಳಿ
ಯಂದಿರಲ್ಲಾ ಮುನಿದುಕೊಲಲೆವು
ಗಿಂದು ಬೆಸಸಿದಡಕ್ರಮವನಾಮಾಳ್ಪೆನೆಂತೆಂದ ೬೪

ಎಲವೊ ಸಂಶಯಬೇಡ ಗಜದಲಿ
ತುಳಿಸು ತಂಗಿಯ ಮಕ್ಕಳನು ಗೋ
ವಳರುಸಹಿತೆಲ್ಲರನು ಕರೆಸುವೆನೀ ಚತುರ್ದಶಿಗೆ
ಬಲ ಬಲಿಪ್ರಮುಧರನು ನೀ ಬಾ
ಗಿಲಲಿ ತಪ್ಪಿದಡಿಕ್ಕುವುದು ಕಳ
ನೊಳಗೆ ಮಲ್ಲರು ನೀವಿದಕೆತಲ್ಲಣಿಸಬೇಡೆಂದ ೬೫

ಎಂದುಬೆಸಸಿ ದುರಾತ್ಮರಿಗೆ ಗೋ
ವಿಂದ ರಾಮರ ನಿಖಿಳಗೋವರ
ವೃಂದಸಹಿತೊಡಗೊಂಡು ಬಹ ಮತಿವಂತರಾರೆನುತ
ಮಂದಹಾಸದಲೆಸೆವ ಕರತಳ
ದಿಂದ ಕರವನು ಹಿಡಿದು ಖಳನಿಂ
ತೆಂದನಕ್ರೂರಂಗೆ ಪರಿಮಿತದಲಿ ಮನೋಗತವ ೬೬

ಹೋಗುನೀನೆಲೆತಂದೆ ಗೋಕುಲ
ಕಾಗಿ ತನ್ನಾಜ್ಞೆಯಲಿ ದಿಟನೀ
ನಾಗಲಜಿಪರೆ ಮತ್ತೆ ಕೆಲಬರು ಸ್ವಾಮಿಕಾರ್ಯದಲಿ
ಹೋಗಿಸುರರಂಡಲೆದು ತಂದರು
ಸಾಗರದ ಮನೆಯುವನಸೀ ಭೂ
ಭಾಗಕೆನ್ನಯುವಧೆಗೆ ಗಡ ಕೇಳಿದೆನು ತಾನೆಂದ ೬೭

ಸುರರ ಕೆಲಸವದಂತಿರಲಿ ನಿಜ
ಕರತಳಸ್ಥರಲಾ ಕುರಾರರು
ನೊರಜುಗಳು ಕಾಡುವುವೆ ಕರೆಯಾ ರಾಮಕೃಷ್ಣರನು
ಭರದಲಿನ್ನಂತಿಕಕೆಬಂದಡೆ
ಮರಣವಹುದಂಜದಿರು ಹಬ್ಬಕೆ
ಕರೆದುಕೊಡು ನಾಡಿದು ಚತುರ್ದಶಿಗೆಂದನಾ ಕಂಸ ೬೮

ಭೋಜಕುಲವರ್ಧನನೆ ಹೋಗೀ
ರಾಜರಥದಲಿ ನಂದಗೋಕುಲ
ಕೋಜೆಯಲಿ ಕುಹಕಿಗಳನಿಲ್ಲಿಗೆ ಕೊಂಡುಬಾರೆನುತ
ಭೋಜನೃಪ ಖಳನೆನಿಪ ಕೇಶಿಯು
ನಾ ಜನಾರ್ದನವಧೆಗೆ ನೇಮಿಸಿ
ರಾಜಗೃಹವನು ಹೊಕ್ಕಸೋಲಗ ಹರಿಯುಲಮರಾರಿ ೬೯

ಬೀಳುಕೊಂಡಕ್ರೂರನಾ ರಾ
ಜಾಲಯವಹೊಱವಂಟು ಲಕ್ಷ್ಮೀ
ಲೋಲನಂಘ್ರಿಸರೋಜ ದರುಶನದರ್ತಿಯಲಿ ಬರಲು
ಮೇಳವಿಸಿದುದುರವಿಗೆ ಪಶ್ಚಿಮ
ಶೈಲದಿರವಾ ಯಿರುಳು ಗೋಕುಲ
ಬಾಳಿಯರಿಗವಸರವೆನುತ ನಿತ್ಯಾತ್ಮ ಕೃಷ್ಣನಲಿ ೨೦

ಅರಸಕೇಳಕ್ರೂರನೈತಂ
ದಿರುಳು ದುಮ್ಮಾನದಲಿ ನಿಜಮಂ
ದಿರವ ಹೊಕ್ಕನು ಚಿಂತಿಸುತ ಕೃಷ್ಣಾಂಘ್ರಿ ಪಂಕಜವ
ದರುಶನಕೆ ತಾನಾವನೆಂತೋ
ದೊರಕುವುದು ಮೇಣಾವಕಲ್ಪಾಂ
ತರಕೆ ಬೆಳಗಹುದಲ್ಪಪುಣ್ಯಂಗೆಂದು ಬಿಸುಸುಯ್ದ ೨೧

ಇರುಳನೂಕಿದನಿಂತು ಕೃಷ್ಣನ
ಚರಣವನು ನೆನೆವುತ್ತ ನಿದ್ರಾ
ವಿರಹಿತೇಕ್ಷಣನಿರ ಹರಿಶರಣನವಮನೋರಥವ
ಧರೆಯಲಡ್ಡೈಸುವರದಾರೆಂ
ದಿರದೆ ಸಾಱುವವೊಲ್ಮೂಡಲು
ತರಣಿ ನೂಕಿದನುದಯಶೈಲಾಗ್ರದಲಿ ನಿಜರಥವ ೨೨

ಎದ್ದು ಸಂಧ್ಯಾವಂದನಾದಿಯ
ಶುದ್ಧಮತಿ ಮಾಡಿದನು ಬಳಿಕರಿ
ಮರ್ದನನು ಬಲವಂದು ಗೋಗುರುದೇವತಾದ್ವಿಜರ
ಹೊದ್ದಿದನು ನೃಪರಥವನೊಪ್ಪುವ
ಭದ್ರವಚನದ ಬಹಳ ಘೋಷದ
ಹೃದ್ಯ ಶಕುನವನಾಲಿಸುತಹೊಱವಂಟನಕ್ರೂರ ೨೩

ಇಂದಿದೇ ಕಂಡಪೆನು ಕಾಮನ
ತಂದೆಯನು ಕಮಲಜಭವಾದ್ಯಭಿ
ವಂದ್ಯನನು ಕಮನೀಯಮೂರ್ತಿಯನತುಳಕೀರ್ತಿಯನು
ಕುಂದದಪಸವ್ಯಾಕ್ಷಿಬಾಹು
ಸ್ಪಂದನಂಗಳು ಹೇಳುತಿವೆ ತನ
ಗೆಂದು ಹರುಷಾಮೃತಸಮುದ್ರದಲದ್ದನಡಿಗಡಿಗೆ ೭೪

ಬಂದನಿವನಾ ಕಂಸನಾಜ್ಞೆಯ
ಲಿಂದು ತನ್ನಲ್ಲಿಗೆ ತದಾಶ್ರಯ
ನೆಂದು ತತ್ಪರನೆಂದು ತತ್ಕಾರ್ಯೈಕ ಪರನೆಂದು
ಮಂದಭಾಗ್ಯನನಕಟ ದೇವ ಮು
ಕುಂದನೆನ್ನನು ಬಗೆವನೋ ಗೋ
ವಿಂದನದು ಹುಸಿ ಚೇತನಾತ್ಮಕನಱಿಯನೇ ಯೆಂದ ೭೫

ಇಂತೆನುತ ಮನದೊಳಗೆ ಲಕ್ಷ್ಮೀ
ಕಾಂತನನು ನೆನೆವುತ್ತ ಮಾರ್ಗ
ಕ್ರಾಂತಿಯನು ನೆಱೆಮಱೆದು ತದ್ಗತ ಭಾವಭಕುತಿಯಲಿ
ಸಂತಸದಲೆಯಿತರುತೆ ಗೋಕುಲ
ದಂತಿಕಕೆ ರವಿರಥವನಪರ ದಿ
ಶಾಂತರಕೆ ನೂಕಿದನು ಬರೆಬರೆ ಸಂಜೆರಂಜಿಸಿತು ೭೬

ಬರುತ ಗೋಕುಲದಂತಿಕದಲಾ
ಪರಮಪುರುಷನ ಪಾದಕಮಲದ
ಧರೆಗೆ ಭೂಷಣವಾದ ಹಜ್ಜೆಗಳನು ವನಾಂತದಲಿ
ಇರಲು ಕಂಡನಶೇಷ ವಿಬುಧೇ
ಶ್ವರರ ಮಣಿಮಕುಟ ಪ್ರಭಾ ಕೇ
ಸರಗಳಲಿ ಶೋಭಿಸುತಲಿರಲಾ ಮುಂದೆ ಮಾರ್ಗದಲಿ ೭೭

ಮುಂದೆ ಕಂಡನು ಬರುತ ಗೋಪರ
ವೃಂದದಲಿ ಗೋವುಗಳ ಕಱುಗಳ
ಸಂದಣಿಯು ಸಂಭ್ರಮದಲೆಸೆವಾ ನಂದಗೋಕುಲವ
ಇಂದುಮುಖಿಯರ ಕೃಷ್ಣನಿರುವಾ
ನಂದಭವನ ಶ್ರೇಣಿಗಳನೊಲ
ವಿಂದ ನೋಡುತ ಕೈಮುಗಿವುತ್ತೈತಂಪನೊಲವಿನಲಿ ೭೮

ನೀಲ ಕೈಲಾಸಾದ್ರಿಗಳ ವನ
ಕೇಳಿಯೋ ದಿಕ್ಕರಿಗಳರ್ಭಕ
ಲೀಲೆಯೋ ಸೌಂದರ್ಯಗುಣಸಾಗರದ ಸಂಭ್ರಮವೋ
ಸ್ಥೂಲಮರಕತ ಶುಭ್ರರತ್ನದ
ಸಾಲಭಂಜಿಕೆಗಳೊ ಬಲಿಶ್ರೀ
ಲೋಲರೋ ಯೆನಲೆಸೆವ ಮಂಗಳಮೂರ್ತಿಗಳ ಕಂಡ ೭೯

ಕಂಡು ಪರವಶನಾಗಿ ಪದಯುಗ
ಪುಂಡರೀಕದ ಮೇಲೆ ತನುವನು
ದಿಂಡುಗೆಡಹಿದನೊಪ್ಪಿಸುವವ್ರೋಲೊಡಲನಸುಸಹಿತ
ದಂಡದಂತಿರೆ ನೋಡಿ ಭಕುತನ
ಮಂಡೆಯಲಿಕ್ಕೈಯಿಟ್ಟು ನಿಜ ದೋ
ರ್ದಂಡವನು ನೆಗಹುತ್ತ ತಕ್ಕಯಿಸಿದನು ಕರುಣದಲಿ ೮೦

ಅಡಿಗೆಱಗಲಕ್ರೂರನನು ತಲೆ
ದಡವಿ ತಕ್ಕಯಿಸುತ್ತ ಹಲಧರ
ನಡಿಗಡಿಗೆ ಸುಪ್ರೇಮರಸ ಸಂಕೀರ್ಣ ಭಾವದಲಿ
ನುಡಿಸಿ ಕೇಳುತ ಕುಶಲವನು ಕುಲ
ಗೆಡುಕ ಕಂಸನ ನುಡಿಗಳಿಗೆ ಕಿವಿ
ಗೊಡುತ ನಗುತಕ್ರೂರಸಹಿತ್ತೈತಂದನಾಲಯಕೆ ೮೧

ನಲವು ಮಿಗಲಾತಿಥ್ಯಸತ್ಕ್ರಿಯೆ
ಗಳಲಿ ಮನ್ನಿಸಿ ಕುಳ್ಳಿರಿಸಿ ಹರಿ
ಬಲರು ನಿಜಬಾಂಧವಗೆ ಮಧುಪರ್ಕಾದಿ ಪೂಜೆಗಳ
ಒಲಿದು ಮಾಡಿದರಂಘ್ರಿಯುಗಳವ
ತೊಳೆದು ಮಾರ್ಗಶ್ರಮಗಳನು ನೆಱೆ
ಕಳೆದು ಕೈಗೂಡಿಸಿದರಕ್ರೂರನ ಮನೋರಥವ ೮೨

ಬಳಿಕ ಬಹುವಿಧದನ್ನಪಾನಂ
ಗಳಲಿ ಸಂತರ್ಪಿಸಿದರಾ ಯದು
ಕುಲ ಕುಶೇಶಯ ಭಾನುಗಳು ಭಾಗವತಮುಖ್ಯನನು
ಅಲಘು ಭುಜಬಲರುಂಡು ಕುಳ್ಳಿ
ರ್ದೊಳನಗೆಯ ಸನ್ನೇಹ ವಚನಂ
ಗಳಲಿ ಸಂಭಾಷಣೆಯ ಮಾಡಿದರೊಡನೆ ಯದುವರನ ೮೩

ತಂದೆ ಹೇಳೈ ನೀನಿದೇನೈ
ಬಂದೆ ಬೇಸರವಿಲ್ಲವೇ ನಿ
ನ್ನೊಂದು ಬಾಂಧವವರ್ಗದಲಿ ಪಿತೃ ಮಾತೃಸಹಜರಲಿ
ಇಂದು ನೀ ಬಹುದೆಮ್ಮ ಭಾಗ್ಯದ
ಕಂದೆಱವೆಯಲ್ಲೈ ವಿಚಾರಿಸ
ಲಿಂದಿನೀ ದಿನ ಸುದಿನವಾಯ್ತೆನಲೆಂದನಕ್ರೂರ ೮೪

ಹೇಳಿದನು ತಾ ಬಂದ ಕಾರ್ಯದ
ಮೂಲವೃತ್ತಾಂತವನು ಖಳಕುಲ
ಮೌಳಿ ನೆಗಳಿದನೀತಿಯನು ದುರ್ಮಂತ್ರ ಸಂಗತಿಯ
ಕೇಳು ನೃಪ ದೈತ್ಯಾರಿಬಲರದ
ಕೇಳಿ ಗಹಗಹಿಸುತ್ತ ನಗೆಯಲಿ
ಹೂಳಿದರು ಹೇರಾಳ ಹೃತ್ತಾಪವನು ಯದುವರನ ೮೫

ನಂದಗೋಪಂಗದನು ಹೇಳಿದ
ರೆಂದನಾತನಶೇಷಗೋಪರ
ವೃಂದವನು ನೆಱೆಕರೆಸಿ ಕಾರ್ಯಸ್ಥಿತಿಯ ಸಂಗತಿಯ
ಸಂದ ಗೋರಸ ದಧಿ ಘೃತಾಧಿಕ
ಕಂದ ಮೂಲ ಫಲಾದ್ಯುಪಾಯನ
ದಿಂದ ಬಂಡಿಗಳೆಸೆಯೆ ಹೂಡುವುದೆಂದು ನೇಮಿಸಿದ ೮೬

ಹೊಱವಡಲಿ ಜನವೈದೆ ಮಧುರಾ
ಪುರಕೆ ನೋಡುವ ಬಿಲ್ಲ ಹಬ್ಬದ
ಧರಧುರದ ಸಂಭ್ರಮವನಾ ಹೊಳಲೊಪ್ಪವನು ಸಕಲ
ಧರೆಯ ಜನವೈತಹುದು ಗಡ ನ
ಮ್ಮರಸನಿದೆಲಾ ಕಳುಹಿದನು ಯದು
ವರನನೆಸುತಲ್ಲಲ್ಲಿ ಸಂಭ್ರಮಿಸಿತು ಜನಸ್ತೋಮ ೮೭

ಕೇಳುತಲೆ ಗೋಪಾಂಗನೆಯರೆದೆ
ಹೂಳಿದುದು ವೃತ್ತಾಂತದಲಿ ಸಿರಿ
ಲೋಲನಂಘ್ರಿ ಸರೋಜ ವಿರಹವಿಷಾದ ಭಾರದಲಿ
ಕೋಳುಗೊಂಡಂತಾಗಿ ಮೂರ್ಛಾ
ವ್ಯಾಳ ವಿಷವಿಹ್ವಲೆಯರಶ್ರುವಿ
ಲೋಲನೇತ್ರೆಯರಳಲುಮಿಗೆ ಮಱುಗಿದರು ಮಱುಕೊಳಿಸಿ ೮೮

ಕ್ರೂರನಲ್ಲಾ ಹೆಸರಿದೇಕ
ಕ್ರೂರ ನೆಂದೀತಂಗೆ ನಮ್ಮ ಶ
ರೀರ ಮಾತ್ರವನುಳುಹಿ ಜೀವವನೊಯ್ವ ಪಾತಕಿಗೆ
ಆರು ಕಳೆವರು ವಿರಹ ಪಾರಾ
ವಾರವನು ನಾವೆಂದು ಕಾಂಬೆವು
ಮೇರೆಯಿಲ್ಲದ ಕೃಪೆಯ ವಾರ್ಧಿಯನೆಂದರಬಲೆಯರು ೮೯

ಅತ್ತಲುದಯಾಚಲಕೆ ರವಿರಥ
ವೊತ್ತಿಬರೆ ತಲೆವಾಗಿ ಪದದಲಿ
ಹೆತ್ತವರ ಬೀಳ್ಕೊಂಡು ಸಂತವಿಸುತ್ತಗೋಪಿಯರ
ಚಿತ್ತದಳಲನು ಕಳೆದು ತೆಗೆದಱು
ಪುತ್ತಪರಿಮಿತ ವಚನದಲಿ ವರ
ಮೂರ್ತಿಗಳು ಹೊಱವಂಟರಂದಾ ನಂದಗೋಕುಲವಾ ೯೦

ವೀರವೈಷ್ಣವನೆಱಗಿ ಹರಿಪದ
ವಾರಿಜಕೆ ತಲೆವಾಗಿ ಬಂದ
ಕ್ರೂರ ನೇಱಿದನಾರಥವನಾವಶ್ಯಕವಮಾಡಿ
ಭೂರಿ ಕಹಳಾರವದ ಘನ ಗಂ
ಭೀರ ಭೇರೀರವದ ವಿಪ್ರರ
ವೀರಸೇಸೆಯ ಮಂತ್ರರವದೊಡ್ಡವಣೆ ರಂಜಿಸಿತು ೯೧

ನಂದ ಗೋಪಾದ್ಯಖಿಳ ಗೋಪರ
ವೃಂದವಖಿಳ ವಿಭೂಷಣಾಂಬರ
ದಿಂದ ಹೊಱವಂಟುದು ರಥಾಶ್ವಂಗಳಲಿ ಕೈ ಗೈದು
ಸಂದಣಿಸಲಕ್ರೂರ ಹರಿಬಲ
ರೊಂದು ರಥದಲಿಬರಲು ನೆಱಿದುದು
ಮಂದಿ ಬಂಡಿಗಳೆತ್ತುಗಳು ಗೋವಳರನೊಡೆವೆರಸಿ ೯೨

ಅರಸ ಕೇಳಚ್ಯುತನ ಮೂರ್ತಿಯ
ನಿರದೆ ನೋಡುತ ಚಿತ್ರದಂತಂ
ಬುರುಹಮುಖಿಯರು ನೆಱಿದು ಬಾರನೆ ಮರಳಿ ಮನೆಗೆನುತ
ಹರಿಯುನಾ ಹರಿರಥವನಾ ಧ್ವಜ
ಶಿರವನಾ ರಥರೇಣುಗಳ ನಂ
ಬರದೊಳಗೆ ಕಾಂಬನ್ನವೀಕ್ಷಿಸಿ ಮರಳಿದರು ಮನೆಗೆ ೯೩

ಅತ್ತಲಾ ರಥದಿಂದ ಬಲಪುರು
ಷೋತ್ತಮಾಕ್ರೂರರು ಮನೋವೇ
ಗೋತ್ತರದ ವೇಗದಲಿ ನಡೆದರು ಗೋಪ ಜನಸಹಿತ
ಉತ್ತರಿಸಿ ಕಾಳಿಂದಿಯನು ಗೋ
ಪೋತ್ತಮರು ಮುಂಕೊಂಡು ನಡೆಯಲು
ವಿಸ್ತರದ ಬಂಡಿಗಳ ಬಹಳೋಪಾಯನಂಗಳಲಿ ೯೪

ಬಾರದಿರರಕ್ರೂರನೊಡನಸು
ರಾರಿ ಬಲರೆನುತಲ್ಲಿಗಲ್ಲಿಗೆ
ದಾರಿಯಿಕ್ಕೆಲದಲ್ಲಿ ತತ್ತದ್ದೇಶ ಜನನಿಕರ
ಹಾರುತಿರ್ದುದುಪಾಯನಂಗಳ
ಭೂರಿ ಸಂವರಣೆಯಲಿ ಬಳಿಕದ
ನಾರು ಹವಣಿಸಬಹುದು ಬಹುಳೋತ್ಸವದ ಸಂಭ್ರಮವ ೯೫

ಇಳೆಯ ಜನವಾ ರಾಮಕೃಷ್ಣರ
ಚೆಲುವ ಮೂರ್ತಿಯ ಕಂಡು ಕಣ್ಣಲಿ
ಮುಳುಗಿ ಮೊಗೆದೀಂಟಿದರು ಮಾಣದೆ ತನ್ಮುಖಾಂಬುಜವ
ಲಲಿತ ಮಧುರಸ್ಮೇರನಯನ
ಸ್ಖಲಿತ ಸುಧೆಯನು ಭಲರೆ ಭಾಪುರೆ
ನಳಿನಭವನೀ ಸೃಷ್ಟಿಗಿಂದಿನಲಾಯ್ತು ಫಲವೆನುತ ೯೬

ಅವನಿಪತಿ ಕೇಳತಿಕೃಪೆಯಲವ
ರವರ ಕಾಣಿಸಿಕೊಳುತ ಪುರುಷಾ
ರ್ಥವನು ಕರುಣಿಸುತೆಲ್ಲರಿಗೆ ಕರುಣಾಕಟಾಕ್ಷದಲಿ
ಅವರ ಕಣುಮನಗಳನು ಬಲ ಮಾ
ಧವರು ಪಾಸನಿಸುತ್ತ ನಡೆದರು
ಸವನಿಸಿದ ಸೌಹಾರ್ದದಲಿ ಮಧುರಾಪುರಾಂತಿಕಕೆ ೯೭

ಅತ್ತಲನ್ನೆಗ ಗೋಪರಾ ಪುರು
ಷೋತ್ತಮಾಕ್ರೂರರ ಬರವ ಹಾ
ರುತ್ತ ನಂದಾದಿಗಳು ಮಧುರಾಪುರದ ಹೊಱವಳಲ
ಹತ್ತಿರದ ವನದೊಳಗೆ ಬಿಟ್ಟರು
ವಿಸ್ತರದ ಬೇಡಿಕೆಯ ಬಂಡಿಗ
ಳೊತ್ತರಿಸಿ ನಿಲಲೆಸೆದಳಿರುಗಳ ತಣ್ಣೆಳಲ ತಂಪಿನಲಿ ೯೮

ಬಂದರಲ್ಲಿಗೆ ರಾಮ ಕೇಶವ
ಗಾಂದಿನೀನಂದನರು ಬರುತರ
ವಿಂದನಾಭನು ನಗುತಲಕ್ರೂರನನು ಕೈವಿಡಿದು
ಎಂದನೀ ರಥಸಹಿತ ಹೋಗಾ
ಮುಂದೆ ತಾವೀಯಿರುಳಸಿದಱಿಕೊಳು
ಹಿಂದುಗಳೆದೈತಹೆವು ತಡೆಯದೆ ಮನೆಗೆ ಹೋಗೆಂದ ೯೯

ಹೋಗು ಮನೆಗೆಂದೆಂಬ ಕರುಣಾ
ಸಾಗರನ ಮೊಗನೋಡಿ ಮಿಗೆ ತಲೆ
ವಾಗಿ ಕಂಗಳಲೊಱೆವ ಶೋಕಾಶ್ರುಗಳ ಪೂರದಲಿ
ತೂಗಿದನು ನಿಜಶಿರವ ವಿಸ್ವಲ
ನಾಗಿ ಕೃಷ್ಣಪದಾಬ್ಜ ವಿರಹದ
ಬೇಗೆಯಲಿ ಬೆಂಡಾಗಿ ಬಿನ್ನಹವೆಂದನಕ್ರೂರ ೧೦೦

ಬಿಡೆನು ನಿನ್ನಪದಾರವಿಂದವ
ನೊಡೆಯ ಕರುಣಿಸು ತನ್ನ ಮನೆಯಲಿ
ಬಿಡಿಸುವುದು ಬೀಡಿಕೆಯನೆಂದಕ್ರೂರ ನಂಘ್ರಿಯಲಿ
ಬಿಡದೆ ಹೊರಳುತ್ತಿರಲು ಕಂಬನಿ
ದೊಡೆದು ತಕ್ಕಯಿಸುತ್ತ ಮಿಗೆ ಮೈ
ದಡವಿ ಸಂತವಿಸುತ್ತ ಸರ್ವೇಶ್ವರನು ನೇಮಿಸಿದ ೧೦೧

ಬಹೆನು ತಾನೆಲೆ ತಂದೆ ಪರಿಜನ
ಸಹಿತ ನಿನ್ನಾಲಯಕೆ ಕೊಂದೀ
ಕುಹಕಿಯನು ಬಳಿಕಖಿಳ ಬಾಂಧವಜನವ ಸಂತವಿಸಿ
ವಿಹಿತವೆನಗಿದು ತನ್ನ ಭಕುತರ
ಗೃಹವಲಾರೋಗಿಸುವ ವೋಲಿನ
ಗಹುದೆ ತುಷ್ಟಿ ಜಡಾಗ್ನಿಹೋತ್ರದಲೆಂದನಸುರಾರಿ ೧೦೨

ಎಂದು ಕೈವಿಡಿದನುನಯುಪಲಾ
ಗಾಂದಿನೀ ತನಯುನನು ಕಳುಹಿ ಮು
ಕುಂದನಿಳಿದನು ರಥವನಗ್ರಜನಹಿತ ನಲವಿನಲಿ
ಕೊಂದನಕಟಾ ವಿಧಿಯೆನುತ ರಥ
ದಿಂದ ಪುರವನುಹೊಕ್ಕು ತನ್ನಯ
ಮಂದಿರವನೈದಿದನು ವೈಷ್ಣವಸರಸನನು ಕಂಡು ೧೦೩

ಬೀಳು ಕೊಟ್ಟಕ್ರೂರನನು ಸಿರಿ
ಲೋಲರಾಮರು ಪುರದ ಬಾಹ್ಯ ವಿ
ಶಾಲ ವನದಲಿ ಬಿಡಿಸಿ ಸಂವರಣೆಗಳ ಬಂಡಿಗಳ
ಸಾಲೆನೆಯಲಾ ಕೆಳೆಯ ಗೋಪರ
ಮೇಳವಲಿ ಕಡೆಹಗಲ ಜಾವದ
ವೇಳೆಯಲಿ ಹೊಱವಂಟರೊಪ್ಪಿರಲೀಕ್ಷಿಸಲು ಹೊಳಲ ೧೦೪

ಬರಲು ಪುರಜನ ಕಾಣಿಕೆಯ ಸಿ
ತ್ತರದಿದಿರುಗೊಂಡರ್ಘ್ಯವಾದ್ಯಾ
ದ್ಯುರುತರದ ಪೂಜೆಯಲಿ ಮನ್ನಿಸಿ ಚರಣಯುಗಳದಲಿ
ಶಿರವೆಱಗಿ ಕಣ್ದಣಿಯೆ ಬಲಕೃ
ಷ್ಣರನು ನಡೆನೋಡುತ್ತ ಸುಖಸಾ
ಗರದಲೋಲಾಡುತ್ತಲಿದ್ದುದು ನಕಲಜನ ಸಹಿತ ೧೦೫

ಬೆರಸಿ ಸಾಗರ ಜಲವ ನದಿಗಳು
ಮರಳಲಱಿಯದವೋಲು ಕೃಷ್ಣನ
ಪರಮ ಮಂಗಳ ದಿವ್ಯಮೂರ್ತಿವಿಳಾಸಲಕ್ಷ್ಮಿಯನು
ಬೆರಸಿದಾಪುರಜನದ ಕಂಗಳ
ಮರಳುದಲೆಯನದಾರು ಕಂಡವ
ರಿರದೆ ಬೀದಿಯ ಚಿತ್ರದಂತಿರ್ದುದು ಜನಸ್ತೋಮ ೧೦೬

ಅರಸಕೇಳಾ ರಾಮಕೃಷ್ಣರು
ಬರುತ ಕಂಡರು ರಾಜ ಮಾರ್ಗದ
ಲುರವಣಿಸಿ ಪರಿಜನದಲೈತಹ ರಾಜರಜಕನನು
ಮುರಿದ ಹುಬ್ಬಿನ ಬಿಟ್ಟಕಂಗಳ
ಬೆಳಳ ಮಿಾಸೆಯ ಬಿಗಿದಬಿಂಕದ
ದುರುಳನನು ನುಡಿಸಿದರು ನೆರವಿಗಳೀಕ್ಷಿಸಲು ನಗುತ ೧೦೭

ನಿಲ್ಲು ಹೋಗದಿರೆಲವೊ ನವ್ಮನು
ಬಲ್ಲಡೇನ್ನೈ ನುಡಿಸಲೇತ
ಕ್ಕೊಲ್ಲೆ ನಿನ್ನೊಡೆಯಂಗೆ ನಾವಳಿಯಿಂದಿರೆಂಬರಲಾ
ಬಲ್ಲಿದನು ನೀ ರಂಗಗಾರರಿ
ಗೆಲ್ಲ ಮಡಿಲೇನಾಯ್ತು ಕೊಡು ನಿನ
ಗುಳ್ಳವಸನದಲುತ್ತಮವ ನಮಗೆಂದನಸುರಾರಿ ೧೦೮

ಕೊಡುವುದಿಬ್ಬರಿಗೆರಡು ವಸ್ತ್ರವ
ನುಡಲುತಕ್ಕುದನಕಟ ನವ್ಮನು
ಪೊಡವಿ ಯೀಜನ ರಾಯನಳಿಯಂದಿರುಗಳೆಂದೆವ್ಮಾ
ನುಡಿಗೆಱಗುತಿದೆ ನೀನದೇತಕೆ
ಕಡೆಗಣಿಸಿ ಗರ್ವದಲಿ ಮುಂದಡಿ
ಯಿಡುವೆ ಹೋಗದಿರೆನಲು ಮಡಿವಳನೆಂದನುಱೆಮುಳಿದು ೧೦೯

ಅಡವಿಯಲಿ ಸಂಚರಿಸುವವ ರಿಂ
ಗುಡಲುತಕ್ಕದಕಾಣೆನೇತಕೆ
ಬಡವುಗಳಿರೀ ವಸ್ತ್ರವನು ಬಯಸುವಿರಿ ಬಣಗುಗಳು
ಉಡುವಿರೇಸ್ಸೆ ನೀವು ತನ್ನಯ
ಮಡಿಗಳಿಗೆ ಮೆಚ್ಚಿದಿರಿ ಬೀದಿಯ
ಕಡೆಯಲಿದೆಲಾವಸ್ತ್ರ ನಿಮಗುಡತಕ್ಕವವೆಯೆಂದ ೧೧೦

ಎಲವೊ ಜಱೆಯದಿರಿಳೆಗಧೀಶ್ವರ
ನೊಲುವ ಮಡಿಗಳನೆಂದು ಬೇಡಿದ
ಡುಲಿವೆ ಮನಬಂದಂತೆ ಫಡ ಹೋಗದಿರು ಹೋಗದಿರು
ಒಲಿದು ಕೊಟ್ಟಡೆ ಲೇಸನೀ ಕೈ
ಯೊಡನೆ ತೋಱುವೆನಲ್ಲದಿರ್ದಡೆ
ತಲೆಸಹಿತ ಮಡಿವರ್ಗ ತನ್ನದೆನುತ್ತ ಹರಿನುಡಿದ ೧೧೧

ಉಡುವವಸ್ತ್ರವ ಕುಡಲು ಲೇಸನು
ಕೊಡುವೆಗಡ ಲೋಗರಿಗೆ ಹರಹರ
ಕಡುಕೃಪಣತನವೇಕೆ ಹೋಹರೆ ಹೋಗಿ ನೀವೆನುತ
ಜಡಿದು ಲಕ್ಷ್ಮೀಪತಿಯವಜ್ಞೆಯ
ಲೆಡಹಿಕಾಣದೆ ಪಾಪಿ ಧಟ್ಟಿಸಿ
ನಡೆದನಂತಕಪುರಕೆ ನಡೆವಂತಿರೆ ಸರಾಗದಲಿ ೧೧೨

ಅಟ್ಟಿರಜಕನ ತಲೆಯನುಗುರಲಿ
ಸೃಷ್ಟಿ ಪಾಲಕರೊಡೆಯ ನವನಿಯ
ಲಟ್ಟಿ ಕೆಡೆಯಲು ಕೆಡಹಿ ದಿಗುಬಲಿಗೊಟ್ಟು ಬವರದಲಿ
ಕೆಟ್ಟೆವೆನುತುಳಿದವರು ಹೊಱೆಗಳ
ಬಿಟ್ಟು ಹಾಯ್ದರು ದೆಸೆದೆಸೆಗೆ ಕಂ
ಗೆಟ್ಟು ಕೃಷ್ಣನ ತೋಟಿಯೇಬೇಡೆನುತ ತಮತಮಗೆ ೧೧೩

ಕಂಡವರು ಲೇಸಾಯ್ತು ಖಳನು
ದ್ದಂಡತನಕಿದು ಘನವೆಯೆನುತಾ
ಪುಂಡರೀಕಾಕ್ಷನನು ಹೊಗಳಿದರಂದು ಹರ್ಷದಲಿ
ಗಂಡುಗಲಿಗಳು ಬಳಿಕ ವಸನದ
ದಿಂಡುಗಳಲುತ್ತಮವನಾಯಿದು
ಕೊಂಡುಳಿದುವ ನಿತ್ತರಾಗೋಪರಿಗೆ ಪರಿಜನಕೆ ೧೧೪

ತೊಟ್ಟ ನಿಜಱಿಗುಪ್ಪಸದ ಪಾಂಗಿನ
ಕಟ್ಟದುಡಿನೇವಳದ ಮಣಿಗಳ
ಪಟ್ಟೆ ಪೀತಾಂಬರದ ನೀಲಾಂಬರದ ನಿಜಱಿಗೆಗಳ
ಇಟ್ಟ ಮಣಿಕುಂಡಲದ ನಗೆಮೊಗ
ದಷ್ಟಭೂತಿಗಳೊಡೆಯರೆಸೆದರು
ಪಟ್ಟದಾನೆಯ ಮಱಿಗಳಂತಾಜನದ ಮಧ್ಯದಲಿ ೧೧೫

ಮುಂದೆ ಬರುತವೆ ಮಾಲೆಗಾಱರ
ಮಂದಿರಂಗಳನೀಕ್ಷಿಸುತ ಗೋ
ವಿಂದ ರಾಮರು ಕಂಡರೊಬ್ಬ ಸುದಾಮನೆಂಬವನ
ಮಂದಿರವ ನಿಜಭಕುತ ಜನನೀ
ಮಂದಿರವನುರುವಿನಯ ಗುಣಗಣ
ಮಂದಿರವನಭಿನವಸುಪುಷ್ಪಾವೋದ ಮಂದಿರವ ೧೧೬

ಅರಸ ಕೇಳಯ್ ರಾಮಕೃಷ್ಣರ
ಬರವ ಕಾಣುತ ಪರಮ ಹರುಷಾಂ
ಕುರಿತ ಪುಳುಕಿತಗಾತ್ರನಂಘ್ರಿಸರೋಜಯುಗಳದಲಿ
ಶಿರವೆಱಗಿ ಕೈಗೊಟ್ಟು ನಿಜ ಮಂ
ದಿರಕೆ ಬಿಜಯಂಗೈಸಿ ತಂದಾ
ದರದಲಾರಾಧಿಸಿದನಂದಃ ಸುದಾಮನೊಲವಿನಲಿ ೧೧೭

ಸಲಿಸಿಯೊಲವನು ಕಾಂತಿಯನು ಬಲ
ಬಲಿಮಥನರಲ್ಲಿಂದ ಭಕುತನ
ನಿಲಯವನು ಹೊಱವಂಟು ಬರುತಿರೆ ರಾಜಮಾರ್ಗದಲಿ
ಲಲನೆಯೊಬ್ಬಳು ಮುಂದೆ ಪೊಂಬ
ಟ್ಟಲಲಿ ಗಂಧವಪಿಡಿದು ದೆಸೆ ಪರಿ
ಮಳಿಸಿ ಹೋಗುತ್ತಿರಲು ಕಂಡರು ಕಮಲಲೋಚನೆಯ ೧೧೮

ನಕ್ಕರೊಬ್ಬರನೊಬ್ಬರೀಕ್ಷಿಸು
ತಕ್ಕಟೀ ಸತಿಗೇಕೆ ಯವ್ವನ
ದುಕ್ಕು ಸೊಕ್ಕಿನಹರೆಯವೇಕೀ ತೇಜವೀರೂಪು
ತಕ್ಕುದೈ ಮುಪ್ಪೊದಲು ವಿಧಿಕೃತ
ವಕ್ಕು ಶಿವಶಿವ ನೋಡಿಯೆನುತಾ
ರಕ್ಕಸರಹಗೆ ನೋಡಿ ಕೆಳೆಯರನಾಕೆಗಿಂತೆಂದ ೧೧೯

ಈವುದನುಲೇಪನವನೆಲೆಗೇ
ಯೀವೆನಿಷ್ಟಾರ್ಥವನು ನಿನಗಿದ
ಕಾವ ಸಂಶಯಬೇಡ ನೃಪನಳಿಯಂದಿರಾವೆನುತ
ದೇವದೇವನು ನುಡಿಸಲಾ ರಾ
ಜೀವಲೋಚನೆ ಮನದೊಳಗೆ ಸಂ
ಭಾವಿಸುತ ಮೊಗನೆಗಹಿ ಮಾತಾಡಿದಳು ಹರಿಯೊಡನೆ ೧೨೦

ಲೇಸನಾಡಿದೆ ವೀರ ಮೋಹದ
ದಾಸಿಯಾನೀ ಭೋಜರಾಜಗೆ
ಯೇನನಾರೊಯ್ದುತ್ತಡನುಲೇಪನವನದನೊಲಿದು
ವಾಸನಿಸನಾನಿತ್ತುದನು ಕರ
ಲೇಸೆನುತ ಕೈಕೊಂಬನೆನ್ನ
ಭ್ಯಾಸವಿದಱಲಿ ಸುಪ್ರತಿಷ್ಠಿತವೆಂದಳಬುಜಾಕ್ಷಿ ೧೨೧

ಏನಮಾಡಿದಡೇನು ಕರ್ಮಾ
ಧೀನದಲಿ ತನ್ನೊಡಲರೂಪು ವಿ
ಹೀನವಾದುದು ಕೆಟ್ಟೆನಾರಿಗೆಹೇಳುವೆನು ಹದನ
ಈನಿಮಿತ್ತ ತ್ರಿವಕ್ರೆಯೆಂಬಭಿ
ಧಾನವಡೆದೆನು ಇನ್ನು ನೀನಿ
ನ್ನೇನನೀವೆ ವಿಧಾತ್ರನಲ್ಲೆಂದಳು ಸರೋಜಮುಖಿ ೧೨

ಇತ್ತಪೆನು ಗಂಧವನು ನಿನ್ನೀ
ಚಿತ್ತದೊಲವೇ ಸಾಕು ಕಾಣೆನು
ಮರ್ತ್ಯರೊಳಗೀ ನಿನ್ನ ಹೋಲುವ ಪುರುಷಭೂಷಣರಾ
ಸತ್ಯ ಸಂಧನೆನೀನಿರಲು ಹಿಡಿ
ಮತ್ತೆ ಯೋಗ್ಯರದಾರೆನುತ್ತಾ
ಮತ್ತಕಾಶಿನಿ ಕೊಟ್ಟಳನುಲೇಪನವನಚ್ಯುತಗೆ ೧೩

ವನಿತೆ ತನ್ನನು ಕೊಡುವವೋಲಾ
ದನುಜಹರ ರಾಮರಿಗೆ ಗಂಧವ
ನನಿತುವನು ಕೊಡಲೊಲಿದು ಕರುಣಾವನಧಿಗಳು ಕಂಡು
ತನುವಿನಪರಾರ್ಧದೊಳಗನುಲೇ
ಪನವನೊಪ್ಪಿರೆ ಧರಿಸಿ ಕೆಳೆಯರ
ತನು ನೆನೆಯಲೋಕುಳಿಯನಾಡಿದರಮಳಗಂಧದಲಿ ೧೪

ಧರೆಯಲಿಂದ್ರನ ರಂಭೆಯೋ ಕಿ
ನ್ನರವಧುವೊ ಗಂಧರ್ವೆಯೋ ಸಂ
ಚರಿಸುವುರಗಾಲಯವನುಳಿದಾ ನಾಗಕನ್ನಿಕೆಯೋ
ಪರಮ ಪುರುಷೋತ್ತಮನ ಕರಸಂ
ಸ್ಪರುಶದಲಿ ಸೈರಂಧ್ರಿ ಯಂಗೀ
ಕರಿಸಿದಳೊ ದಿವ್ಯಾಕೃತಿಯನೆನಲೆಸೆದಳಬುಜಾಕ್ಷಿ ೧೫

ಬಿಲ್ಲಹಬ್ಬವೆನುತ್ತ ಧರೆಯೊಳ
ಗೆಲ್ಲ ಬೊಬ್ಬಿ ಱಿದಾಱುತಿದೆಲಾ
ಬಿಲ್ಲುಗಡ ತೋಱಿರೇಯೆನುತತಾನಡೆಯೆ ಧನುಶಾಲೆ
ಯೆಲ್ಲಿ ಹೇಳಿಯೆನುತ್ತ ಲಕ್ಷ್ಮೀ
ವಲ್ಲಭನು ಬೆಸಗೊಳುತ ಬಂದನು
ನಿಲ್ಲದಾಯುಧಶಾಲೆಗಾ ಬಲಗೋವಳರು ಸಹಿತ ೧೨೬

ಕಂಡರಿದಿರಲಿ ಮೆಱಿವುತಿಹ ಕೋ
ದಂಡವನು ಮಣಿಕನಕರಚನೋ
ದ್ದಂಡವನು ರಿಪು ಭಟವಿನಾಶನ ಕಾಲದಂಡವನು
ಕಂಡಿರೇ ಗೋವಳರು ಧನುವನು
ಕಂಡಿರೇ ನೀವಣ್ಣದೇವರು
ಖಂಡಪರಶುವಿನಾಣೆ ಕೌತುಕವಿತ್ತ ನೋಡೆಂದ ೧೨೭

ದೃಷ್ಟಿ ಸಫಲವಿದಾಯ್ತು ಕೈಗಳು
ಮುಟ್ಟಿ ಸಫಲವ ಹಡೆಯಲಾಗವೆ
ಸೃಷ್ಟಿಯಲಿ ಧರಿಸುವ ಮಹಾತ್ಮರದಾರೊ ತಾನಿದನು
ಮುಟ್ಟಿನೋಡುವೆವೆನುತ ದೈತ್ಯ ಘ
ರಟ್ಟನಾ ಬಲುಬಿಲ್ಲನೀಕ್ಷಿಸಿ
ಬೆಟ್ಟದಂತಿರಲೆಡದ ಕೈಯಲಿ ನೆಗೆಹಿದನು ತುಡುಕಿ ೧೨೮

ಎಲವೊ ಹೋಹೋ ತಮ್ಮ ಬಿದ್ದರ
ಕೊಲುವುದೆಲ್ಲರ ನಿರಿಸಿರಿಸು ಸಿ
ನ್ನಳವಿನಾಯುಧವಲ್ಲ ಬಿಡುಬಿಡು ಮಾಣುಮಾಣೆನುತ
ಉಲಿಯಲಾ ರಾಮಾದಿಗಳು ಹಳು
ಹಳು ಮಹಾಧನು ಬೇಡ ಬಿದ್ದರೆ
ಕೊಲಿಸಿದವರಾವಲ್ಲ ವೆನುತಿರ್ದುದು ಭಟವ್ರಾತ ೧೨೯

ತೊಡಿಸಿದನು ಚಾಪದಲಿ ತಿರುವನು
ಕಡುಗಿ ಕಾಪಿನಭಟರು ಮಿಗೆ ಬೊ
ಬ್ಬಿಡಲು ತೆಗೆದಡೆ ತಪ್ಪೆತನಗಿದು ಕೀರ್ತಿ ವೀರರಿಗೆ
ಮಡಿದರಮರರ ಪದವೆನುತ ಕಿವಿ
ಗಡಿಗೆ ತೆಗೆದಾರ್ದಚಲಚಾಪವ
ನುಡಿದ ನಿಕ್ಕಡಿಯಾಗಲಂಬರತಳದಲಜಬೆದಱೆ ೧೩೦

ಕಟ್ಟು ಹಿಡಿ ಕೊಲ್ಲಿವನನೇತಕೆ
ದುಷ್ಟನನು ಹೊಗಿಸಿದಿರಿ ಬಾಗಿಲ
ಕಟ್ಟೆ ಕೊಳಲಿಮಹಾಭಟರು ಹೊಱವಡದವೋಲೆನುತ
ಇಟ್ಟಣಿಸಿ ಕಾಪಿನ ಮಹಾಭಟ
ರಿಟ್ಟೆ ಮುಸಲ ಮುಸುಂಡಿ ಮುದ್ಗರ
ಪಟ್ಟಸಂಗಳ ಪಾಯುದಳವ್ವೈತಂದುವೆಂಟಣಿಸಿ ೧೩೧

ಕಡುಗಿಬಹ ಕಾಪಿನ ಮಹಾಭಟ
ಪಡೆಯನೀಕ್ಷಿಸಿ ನಗುತೆರಡು ಬಿ
ಲ್ಲುಡಿಯನಿಬ್ಬರು ಕೊಂಡು ನಿಂದರು ಬಾಗಿಲಿದ್ದೆನೆಗೆ
ಹಿಡಿಯಬಂದಿರೆ ನೀವೆನುತ ಕೈ
ಗುಡಿಸಿದರು ಕಾಲಂಗೆ ಮಡಿದುದು
ಪಡೆ ಪರಾಜಯವಾರ್ತೆಹರಿದುದು ಕಂಸನೋಲಗಕೆ ೧೩೨

ಮತ್ತೆ ಕಂಸಾಸುರನಬೆಸದಲಿ
ಮತ್ತಗಜಘಟೆ ಕುದುರೆ ಕಾಲಾ
ಳೊತ್ತರಿಸಿ ಬರಲಾಹವಕೆ ಬೊಬ್ಬಿಱಿದು ಬಾಗಿಲಿಗೆ
ಮುತ್ತಿಗೆಯ ಪರಬಲದ ಜೀವವ
ಮೃತ್ಯುವಿಗೆ ಮಾಮಾಱಿ ಪಿಡಿದಂ
ತುತ್ತಮಶ್ಲೋಕಾಖ್ಯರುಪಸಂಹರಿಸಿದರು ಬಲವ ೧೩೩

ಬಳಿಕ ರವಿ ನಿಜರಥವನಾ ಖಳ
ಕುಲಶಿರೋಮಣಿ ಹರಿಸದಿರನೆಂ
ದಿಳಿದನಸ್ತಾಚಲದ ತಪ್ಪಲ [1]ಕಾನನದವುರೆಗೆ[1]
ಹಲಧರ ಶ್ರೀನಾಥರಾಯುಧ
ನಿಳಯವನು ಹೊಱವಂಟು ಬಂದರು
ಹೊಳಲಸಿರಿಯನು ನೋಡಿ ಬೀಡಿಕೆಗಾಗಿ ನಲವಿನಲಿ ೧೩೪

---

೬

# ಕಂಸವಧೆ

ಅರಸಕೇಳಾ ರಾಮಕೃಷ್ಣರ
ಚರಿತವನು ಸಾಹಸವನಾ ಧರ
ಧುರದ ವೀರ ಪರಾಕ್ರಮವ ನಿಜಚಾಪ ಭಂಜನವ
ಇರದೆ ನಿಜಬಲನಾಶವನು ನಂ
ಗರದ ಕಲಿತನಗಳನು ಕೇಳ್ದಾ
ಯಿರುಳು ಜಾಗರವಾಯ್ತು ಕಂಸಂಗತಿನೃಶಂಸಂಗೆ ೧

ಕರೆಸಿದನು ಮಲ್ಲರನು ಮಾವಂ
ತರನು ಮನದಂಧತೆಗೆ ಕತ್ತಲೆ
ನೆರವುಬರೆ ಯಾಲೋಚನೆಗೆ ಬೇಪವರ ಮಂತ್ರಿಗಳ
ಬರಿಸಿ ನೃಪನಿರುಳೋಲಗವ ನಿ
ತ್ತರಿದಿಶಾವಿಟ ನಳಲುತಂತಃ
ಕರಣದಲಿ ಕಳವಳಿಗನಾಜ್ಞಾಪಿಸಿದನವರೊಡನೆ ೨

---

1 ತಾವರೆಯ ವನಕೆ1

ಬಂದರೀವಸುದೇವ ಕುಹಕಿಯ
ನಂದನರು ತನ್ನಾಜ್ಞೆಯಿಂದೀ
ಗಾಂದಿನೀಸುತನೊಡನೆ ತನ್ನಯಪುರಕೆ ರಜಕನನು
ಕೊಂದರುಡಲೀಯದೊಡೆ ಗಡ ತಾ
ಮಂದಿಯೊಳು ಬಲುಬಿಲ್ಲಮುಱಿದು ಮು
ಕುಂದರಾಮರು ಕೇಳಿದಿರೆ ನೀವ್ ಬಾಲಕೇಳಿಗಳ ೩

ಉಡಿದ ಬಿಲ್ಲಿನದಡಿಗಳಲಿ ಬಡಿ
ಬಡಿದು ಕಾಪಿನ ಭಟರನೆಲ್ಲರ
ಕೆಡಹಿದರು ತಾ ಕಳುಹಿದೀ ಚತುರಂಗಸೈನಿಕವ
ಮಡುಹಿದರು ಗಡ ಕೈದುಕೊಳ್ಳದೆ
ಕಡುಗಲಿಗಳವರಿಬ್ಬರೀ ದಿಟ
ವೊಡವಿಗಗ್ಗದ ಭಟರೆನುತ ಬಿಸುಸುಯ್ದನಾ ಕಂಸ ೪

ರಂಗವನು ಕೈಗೈದು ರಣಭೂ
ತಂಗಳನು ಪೂಜಿಸುವುದತಿಭಯ
ಭಂಗನಾ ವರಮಂತ್ರಮಲ್ಲರನೊಲಿದು ಬೀಳ್ಕೊಳಿಸಿ
ಸಿಂಗಿಯನು ಕೊಂಡಂತೆ ಚಲಸ
ಪ್ರಾಂಗನಿದ್ದನು ರಾಮಕೃಷ್ಣರ
ಸಂಗರದ ಸಾಹಸವ ನೆನೆವುತ್ತ ಮನದೊಳಗೆ ೫

ಕಂಡ ನಿರುಳಪಶಕುನವನು ಭೂ
ಮಂಡಲದಲಭ್ರದಲಿ ದೆಸೆಯಲಿ
ಗಂಡುಗಲಿ ನಿಜದೇಹದಲಿ ನಾನಾವಿಧಂಗಳಲಿ
ಕಂಡು ಮರಣತ್ರಾಸದಲಿ ಭಯ
ಗೊಂಡು ಮನದನುತಾಪಶಿಖಿಯಲಿ
ಕೆಂಡವನು ನುಂಗಿದವೊಲುಮ್ಮಳಿಸಿದನು ಮಿಗೆ ಕಂಸ ೬

ಕಾಣುತವೆ ಬಹುವಿಧ ನಿಮಿತ್ತ
ಶ್ರೇಣಿಗಳನೀಪರಿಯಲಾತ್ಮ
ಪ್ರಾಣನಾಶನಹೇತುಗಳ ನಡಿಗಡಿಗೆ ಕಂಪಿಸುತ
ಕೇಣವಿಲ್ಲದೆ ಕಾಲಭಯವನು
ಕೇಣಿಯನು ಕೊಂಡಂತೆ ಕಂಸ
ಕ್ಷೋಣಿಪತಿ ಕುಳ್ಳಿರ್ದನಾತ್ಮಧ್ಯಾನರತನಂತ ೭

ಖಳನ ಕರ್ಮಕ್ಷಯದವೊಲು ಕ
ತ್ತಲೆಗೆ ಸಂಕ್ಷಯವಾಯ್ತು ಮೂಡಲು
ನಳಿನಸಖನ ರಥಾಶ್ವತತಿನೂಕಿದವು ಗಿರಿವರಕೆ
ಮೊಳಗಿದುವು ಭೇರಿಗಳು ಭುವನ
ಪ್ರಳಯದಂತಿರೆ ಮಲ್ಲರಂಗದ
ಬಳಸಿನಲಿ ಮಂಚಂಗಳೆಸೆದುವು ನಾಲ್ಕುದಿಕ್ಕಿನಲಿ ೮

ಅತ್ತಲುಪವನದಿಂದ ಗೋವರ
ಮೊತ್ತ ವೈತಂದರನನು ಕಂ
ಡಿತ್ತು ಕಾಣಿಕೆಗಳನು ಕುಳ್ಳಿರಲಂದು ಮಂಚದಲಿ
ಮತ್ತೆ ಕೆಳೆಯರು ಸಹಿತ ಬಲಪುರು
ಷೋತ್ತಮರು ಕೃತಭೋಜನರು ಸಂ
ಪತ್ತಿನಲಿ ಹೊಱವಂಟರಾ ಹೊಱವಳಲನೀಕ್ಷಿಸುತ ೯

ವೀರವರರೈತರುತ ರಂಗ
ದ್ವಾರದಲಿ ಕೈಕಾಲ ಧರಿಸಿದ
ಮೇರುಗಿರಿಯೋ ಗಜವೊ ಗಂಡಸ್ಥಳದ ಮದಜಲದ
ಧಾರೆಯೋ ಸುರನದಿಯ ನಿರ್ಝರ
ವಾರಿಯೋ ಹೇಳೆನಲು ಕಂಡರು
ದೂರದಿಂದವೆ ಕುವಲಯಾಪೀಡನ ಮಹೋನ್ನತಿಯ ೧೦

ಮತ್ತಗಜ ಮಾವಂತನಿಱಿಯಲು
ನೆತ್ತಿಯನು ಕೋಪಾಗ್ನಿಯಲಿ ತನು
ಹೊತ್ತಿ ಹೊಗೆವಾಲಿಗಳ ಹೊಗಱಿನ ವಿಸ್ಫುಲಿಂಗದಲಿ
ಮೃತ್ಯು ಮೈಮುರಿದೆದ್ದವೊಲು ಹರಿ
ಯುತ್ತಮಶ್ಲೋಕನನು ರಣದಲಿ
ಸುತ್ತಿ ಹಿಡಿದುದು ಸುಂಡಿಲಲಿ ಬಲಗೋವಳರು ಬೆದರೆ ೧೧

ಬಿಡಿಸಿಕೊಂಡಾ ಗಜದ ಮಸ್ತಕ
ವೊಡೆಯಲಪ್ಪಳಿಸಿದನು ಮುತ್ತುಗ
ಳೊಡನೆ ಚೆಲ್ಲಲು ಗಗನತಳ ತಾರಗೆಗಳಂದದಲಿ
ಹಿಡುಹುಗೊಡದಸುರಾರಿ ಕಾಲುಗ
ಳೆಡೆಯಲಡಗಿದಡಱಿಸಿ ಕಾಣದೆ
ತುಡುಕುತಿರ್ದುದು ತನ್ನವರನಾಹಸ್ತಿ ಹರಿಹರಿದು ೧೨

ಕಾಣದಜ್ಞಾನಿಗಳು ಕರಣ
ಪ್ರಾಣಸಾಕ್ಷಿಯನಕಟ ವಿಷಯ
ಶ್ರೇಣಿಗಳಲಱಿಸುತ್ತ ತೊಳಲುವವೋಲು ಮುರಹರನ
ಕಾಣದರಸುತ ಕಂಡುದಾತ್ಮ
ಘ್ರಾಣದೃಷ್ಟಿಯಲೊಳಗಿಹುದ ಗೀ
ರ್ವಾಣಿಗಳವೋಲಡಸಿ ಹಿಡಿದುದು ಸುಂಡಲಲಿ ಹರಿಯ ೧೩

ಹಿಡಿದುದೋ ಗಜವೆನುತ ಜನ ಬೊ
ಬ್ಬಿಡಲು ಸುಂಡಿಲಸುತ್ತಿ ತೆಗೆಯಲು
ಪೊಡವಿ ಸಪ್ತದ್ವೀಪ ಸಾಗರ ಶೈಲ ವನ ಸಹಿತ
ನಡುಗಿದುದು ಸುರನಿಕರ ಮಿಗೆ ಬಾ
ಯ್ಬಿಡಲು ದಂತದಲಿಱಿದು ತನು ಜವ
ವುಡಿಯೆ ರಣದಲಿ ಮತ್ತಗಜ ಹೆಣಗಿದುದು ಹರಿಯೊಡನೆ ೧೪

ಸದೆದು ಮಾವಂತರನು ಕಾಲನ
ಸದನವನು ಹೊಗಿಸುತ್ತ ಕಡುಗುವ
ಮದಗಜವ ಕೆಡಹಿದನು ಶುಂಡಾಲವನು ಹಿಡಿದೌಂಕಿ
ತ್ರಿದಶರಾಯನು ವಜ್ರದಲಿ ಕೆಡ
ಹಿದರೆ ಸುರಗಿರಿ ವಜ್ರಹತಿಯಲಿ
ಬಿದುರಿಬೀಳುವವೋಲು ಬಿದ್ದುದು ಭದ್ರಗಜವಿಳೆಗೆ ೧೫

ಮತ್ತಗಜವನು ಕೆಡಹಿ ನಿಂದಿ
ರ್ದುತ್ತಮೋತ್ತಮನದಱ ಮೇಲಾ
ಡುತ್ತ ಕಂಸನ ಹಲ್ಲುಗಳ ಕೀಳ್ವಂತೆ ದಂತವನು
ಕಿತ್ತು ಗಜದಾರೋಹಕರ ಕೆಡೆ
ಗುತ್ತಿಕೊಂದನು ಸುರನಿಕರ ಹಾ
ಡುತ್ತ ಹರಸುತ್ತಮನು ಕಱೆದರು ಪುಷ್ಪವೃಷ್ಟಿಗಳ ೧೬

ಹೆಗಲದಂತದ ಮೆಱೆವ ಪಿಲ್ಲಣಿ
ಗೆಗಳಲಾ ಬಲರಾಮ ದೈತ್ಯಾ
ರಿಗಳು ಕೆಳೆಯರು ಸಹಿತ ರಂಗದ್ವಾರ ರಚನೆಗಳ
ಬಗೆದುನೋಡುತ ಹೊಕ್ಕರೆಸೆವೋ
ಲಗದ ವೀರರ ಪಟುಭಟರ ಪಂ
ಕ್ತಿಗಳ ನಾನಾದೇಶಜನದಾಸ್ಥಾನ ಮಂಟಪವ ೧೭

ಅಗಿವಚಾಮರ ಛತ್ರ ನಿಕರದ
ಬಿಗಿವ ಮೇಲ್ಕಟ್ಟುಗಳ ರತ್ನಾ
ಳಿಗಳ ಪರಮೈಶ್ವರ್ಯ ತೇಜೋರಾಶಿಯೆಂದೆನಿಸಿ
ವಿಗಡನುನ್ನತ ಮಂಚದಲಿ ಕಾ
ಳಗವ ನೀಕ್ಷಿಸಲೆಂದು ಹೃದಯದ
ದುಗುಡದಲಿ ಕುಳ್ಳಿರಲು ಕಂಡರು ಕಂಸಭೂಪತಿಯ ೧೮

ಮತ್ತಗಜವನು ಕೊಂದುದನು ಕೇ
ಳುತ್ತ ಮತ್ತವರಾಕೃತಿಯ ಕಾ
ಣುತ್ತ ಖಳನೆದೆಯೊಳಗೆ ಹೊಕ್ಕುದು ಭೀತಿ ತನಗಿವರು
ಮೃತ್ಯುಗಳು ಸಂದೇಹವಿಲ್ಲೆಂ
ದುತ್ತರಿಸಿ ಧೈರ್ಯವನು ಮಿಗೆಮಱು
ಗುತ್ತ ಕುಳ್ಳಿರ್ದನು ಧರಾಧೀಶ್ವರರಮಧ್ಯದಲಿ ೧೯

ಎಂದನಾ ಚಾಣೂರನೆಲೆ ಗೋ
ವಿಂದ ಬಾರೈ ಬಲ್ಲಿದನು ನೀ
ನೆಂದು ಕರೆಸಿದನವನಿಪತಿಯಳಿಯಂದಿರಾಟವನು
ಇಂದು ನೋಳ್ಪ ಮನೋಭಿಲಾಷೆಯ
ಸಂದು ತೋಱುವುದೆಮ್ಮೊಡನೆ ಬ
ಲ್ಲಂದದಲಿ ಮಲ್ಲಶ್ರಮವನೆನಲೆಂದನಸುರಾರಿ ೨೦

ಮಲ್ಲರರಸನೆ ಮರುಳಲಾ ಭೂ
ವಲ್ಲಭನು ಮಲ್ಲಾಂಗ ವಿದ್ಯೆಯ
ದೆಲ್ಲಿಯದು ಗಿರಿವನ ನಿವಾಸಿಗಳಾದ ಗೋಪರಿಗೆ
ಬಲ್ಲಿದನು ತಾನಹೆನು ಕರೆ ನಿಜ
ಮಲ್ಲಬಾಲಕರನು ಧುರಕೆ ಸಮ
ವಲ್ಲ ಸಮರ ವಿಹಾರ ನಮಗಿಬ್ಬರಿಗೆ ಕೇಳೆಂದ ೨೧

ಹಳಚು ನೀನೆನ್ನೊಡನೆ ಮುಷ್ಟಿಕ
ಹಲಧರರು ತಮ್ಮೊಳಗೆ ಕಾದಲಿ
ಸಲಿಸುವೆ ನೃಪನರ್ತಿಯನು ನೋಡಲಿ ವಿನೋದವನು
ಇಳೆಯ ಜನವೆಲೆ ಕೃಷ್ಣ ಕೊಡುಕರ
ತಳವನನುವಾಗೆನುತ ಹಿಡಿದನು
ತಳವನಾ ಚಾಣೂರ ಮುಷ್ಟಿಕ ತಾನು ಹಲಧರನ ೨೨

ಹೊಗುವ ಹತ್ತುವ ಲಾಗಿಸುವ ಹೆಜ್ಜೆ
ದೆಗೆವ ತೊಡಱುವ ತೋರ ಹತ್ತದ
ಬಿಗಿಯುರಗಬಂಧದಲಿ ಬಿಚ್ಚುವ ಬೀಸುವೊಡೆದಿವಿವ
ಬಿಗಿದು ಬೀಳುವ ಭರದಲೇಳುವ
ಗಗನಗತಿಯಲಿ ಲಂಘಿಸುವ ವಱೂ
ಜಗದ ವೀರರು ತೋಱಿದರು ಬಹುವಿಧದ ಬಿನ್ನಣವ ೨೩

ತಿವಿಯೆಲೋ ನೀಮುನ್ನ ಮಲ್ಲಾ
ಹವಕೆ ಮಾನ್ಯನಲಾ ಭಟಾಗ್ರಣಿ
ಬವರವೆನ್ನದು ಬಳಿಕ ಮುಂಗಾಣಿಕೆಯು ನಿನ್ನದೆಲೈ
ಜವವ ತೋಱಾಯೆನಲು ಮಿಗೆ ಮಾ
ಧವನ ನುಡಿಗೇಳುತ್ತ ಮುಷ್ಟಿಯ
ಹವಣಿಸುತ ಚಾಣೂರನೆಱಗಿದನಸುರಹರನೆದೆಯ ೨೪

ಆಯಿತೇ ಸಂಕಲ್ಪ ನೋಡೆ
ನ್ನಾಯತಿಕೆಯನು ನಿಲ್ಲೆನುತ ನಾ
ರಾಯಣನು ನಗುತಟ್ಟಹಾಸದಲಾ ಮಹಾಭಟನ
ಘಾಯವನು ಪರಿಹರಿಸಿ ಕಡುಪೂ
ರಾಯದಲಿ ಭಟನುರವನೆಱಗಲು
ಬಾಯೊಳೊಕ್ಕುದು ರುಧಿರ ನಾನಾವಿವರವೆಱಡಜಲಿ ೨೫

ಬಿಡದೆ ಬೀಸಿದಡರಿಭಟನ ತಲೆ
ಯೊಡೆದು ಸೂಸಿದುದರುಣಜಲ ನಭ
ದೆಡೆಯಲೇ ಹಾರಿತ್ತು ಜೀವ ಶರೀರವನು ಬಿಸುಟು
ಪೊಡವಿಗೀಡಾಡಿದನು ಹೆಣನನು
ಕಡುಗಲಿಯ ಮರಣದಲಿ ಕಟ್ಟಿತು
ಗುಡಿಯನಭ್ರದಲಮರಚಯ ಜಯಜಯತು ಜಯಯೆನುತ ೨೬

ಮುಷ್ಟಿಕನ ಕರಹತಿಗೆ ಬಲಕೈ
ಗೊಟ್ಟು ವಜ್ರಸಮಾನ ದೃಢತರ
ಮುಷ್ಟಿಯಲಿ ಮೋದಿದರೆ ವಕ್ಷಃಸ್ಥಳವನುಸುರಡಗಿ
ಧಟ್ಟುಗೆಡೆದನು ಧರೆಗೆ ಖಳ ಕಡ
ಲಿಟ್ಟು ಹರಿಯಲು ರಕುತ ವಜ್ರದ
ಲಿಟ್ಟ ಗಿರಿಯಂದದಲಿ ಕುಸಿಯಲು ಧರೆ ರಸಾತಳಕೆ ೨೭

ಕಡುಗಿ ಘಡಘಡ ತಾನಿಹೆನು ರಣ
ದೆಡೆಗೆ ನಿಲುನಿಲ್ಲೆನುತ ಬಲವನು
ಬಡಿದು ಕೂಟಾಹ್ವಯನು ಹಳಚಿದನಂತಕನಪುರಕೆ
ನಡೆದನತ್ತಲು ಕಂಸಲಾಖ್ಯನ
ನೆಡದ ಕಾಲಲಿ ಕೃಷ್ಣನೊದೆಯಲು
ಪೊಡವಿಗಿತ್ತನು ತನುವನವರೈದಿದರು ನಿಜಪದವ ೨೮

ಅಸಮಬಲ ಚಾಣೂರ ಮುಷ್ಟಿಕ
ರಸುವಳಿಯೆ ಕೂಟಾದ್ಯರೊಡಲನು
ಬಿಸುಟು ಹೋಗಲು ಮಿಕ್ಕಮಲ್ಲರು ಬಲಮುರಾಂತಕರ
ಗಸಣಿ ನಮಗೇಕೆನುತ ಹಾಯ್ದರು
ದೆಸೆದೆಸೆಗೆ ಜೀವಾಭಿಲಾಷೆಯ
ಲಸುಗಳುಳಿದರೆ ಸಾಕೆನುತ ಸಂಗ್ರಾಮಭೀತಿಯಲಿ ೨೯

ನೂಕಿವರನೂರಿಂದ ಹೊಱಗು
ದ್ರೇಕಿಗಳನೆಲವೆಲವೊ ಹಱಿಗಳ
ನೇಕೆ ಹೊಡೆವಿರಿ ಭಂಡರಿರ ಬಾಹಿರರಿರಜ್ಞರಿರ
ಸಾಕು ನಂದನ ಕೂಳಿಕುಹಕಿಯ
ನೇಕೆ ಕೊಂಡಾಡುವಿರಿ ಬಿಟ್ಟೆನು
ಗೋಕುಲದ ಕೈಸೂಱೆಯನು ನಿಮಗೆಂದನಾ ಕಂಸ ೩೦

ಕೊಲ್ಲಿ ವಸುದೇವನನು ಮಕ್ಕಳು
ಗಳ್ಳನನು ವೃದ್ಧನನು ಕೊಲ್ಲೆಲಿ
ಕೊಲ್ಲಿರಯ್ಯನನುಗ್ರಸೇನನನಾತನನುಜರನು
ಭಲ್ಲೆಯದಲಿಱಿ ಕುಹಕಿ ಯಾದವ
ರೆಲ್ಲರನು ತಡೆಗಡಿ ಯೆನುತ ರಿಪು
ಮಲ್ಲ ಭಂಜನನೆದ್ದು ಕೈವೀಸಿದನು ನಿಜಬಲಕೆ ೩೧

ಅಣ್ಣ ನೀನಿದ ಕೇಳಿದಯ್ ಬಾಯಿ
ಬಣ್ಣಿಗೆಯನಾನಿದಕೆ ತಕ್ಕುದ
ಹಣ್ಣುವೆನು ನೀನೋಡು ಚಿತ್ರವನೆನುತ ಲಘಿಮೆಯಲಿ
ಪುಣ್ಯಸಿಧಿ ಲಂಘಿಸಿದನಂದಾ
ಕಣ್ಣುಮನಗಳು ಕೊಳ್ಳದಸುರಾ
ಗ್ರಣ್ಯನೇಱಿದ ರಾಜಮಂಚಾಗ್ರಕ್ಕೆ ರಭಸದಲಿ ೩೨

ಬರಲು ಕಾಣುತ ಗದ್ದುಗೆಯ ಮೇ
ಲಿರದೆ ಕೆಲದಲಿ ನಿಂದುಕೊಂಡನು
ಹರಿಗೆ ಕಡಿತಲೆಗಳನು ಕಲಿಗಳ ದೇವಸಾಹವಕೆ
ಭರದಲೆಡಬಲವಂಕ ಮೇಲು
ಪ್ಪರದಲವನಿಯಲಣುವಿವರ ಗೋ
ಚರಿಸದಂತಭ್ಯಾಸದಲಿ ತೋಱಿದನು ಕೌಶಲವ ೩೩

ಗರುಡನುರಗನ ನೌಕಿಹಿಡಿವಂ
ತರಿಭಟನ ಸಾಹವದಲಿರದ
ಬ್ಬರಿಸಿ ಕೆಡೆಕೆಡೆಯೆನುತ ಹಿಡಿದನು ಹಾಯ್ದು ಮುಂದಲೆಯ
ಧರೆಗೆ ಬೀಸಾಡುತ್ತ ತಿರುಹುತ
ಪರಮಪುರುಷ ಪುರಾಣನಾತನ
ಕರುಳು ಚೆಲ್ಲಲು ಮೇಲೆ ಬಿದ್ದನು ಹೊಯಿದನವನೊಡಲ ೩೪

ಕಳಿದುದಸು ಕಾಯುವನು ಕಂಸನ
ಬಳಗ ಬಾಯ್ಬಿಡೆ ಬಱಿಹೆಣನ ನೆಳೆ
ದೆಳೆದು ನಲಿದಾಡಿದನು ಕೋಪಾಟೋಪವನು ಬಿಡದೆ
ಮಳೆಗಱೆವವೊಲು ನಭದಿ ಪುಷ್ಪಾ
ವಳಿಗಱೆದರಮರೌಘ ಕೈಗುಡಿ
ಗಳಲಿ ಕುಣಿದುದು ಕೂಡೆ ನಿತ್ಯಾತುಮನ ವರ್ಣಿಸುತ ೩೫

ಅವನಿಪತಿ ಕೇಳಣ್ಣನವನಾ
ನವನು ಕಂಡವನನುಜರಿಗೆ ಮತಿ
ಸವನಿಸಿದುದಾಹವಕೆ ಬಲನೊಡನೆಂಟುಮಂದಿಗಳು
ದಿವವನೆಯಿದಿದರವರ ವನಿತಾ
ನಿವಹ ಕೆಟ್ಟೆವೆನುತ್ತ ಹಾಹಾ
ರವ ದಿಗಂತವನಳ್ಳಿಱಿಯಲೈತಂದರಾಹವಕೆ ೩೬

ಹೊಡೆಹೊಡೆದು ತಲೆ ಬಾಯಿ ಬಸಿಱುಗ
ಳೊಡೆದು ಸುರಿವರುಣಾಂಬು ಕಂಬನಿ
ಗಡಲ ಸಂಗಮವಾಯ್ತು ತಕ್ಕಯಿಸುತ್ತ ಪತಿಗಳನು
ಕೆಡೆದರವನಿಗೆ ಹಳವಿಸುತ ದೆಸೆ
ಯೊಡೆಯಲೊರಲುತ ಬಿಕ್ಕಿಬಿಱಿವುತ
ಮಡದಿಯರು ಬಸವಳಿದರಳಲಿದರತ್ತರಿಳೆಯೊಡೆಯ ೩೭

ಹಾ ರಮಣ ಹಾ ಕಾಂತ ನೆಲನಿದು
ಸೇರಿತೇ ಮೃದುತಲ್ಪ ಶಯ್ಯೆಗೆ
ಸೇರಿದುದೆ ಕಸ್ತೂರಿಕುಂಕಮದಂಗರಾಗವಿದು
ಈ ರಣೋದ್ಗತ ಧೂಳಿರುಧಿರಾ
ಸಾರಸಾಧಿತ ಪಂಕವೆಮಗಿ
ನ್ನಾರುಗತಿ ಹೇಳೇಕೆನುಡಿಯೆಯೆನುತ್ತ ಹಲುಬಿದರು ೩೮

ಇಂತೆನುತ್ತಿರೆ ಕೃಷ್ಣನಾ ನೃಪ
ಕಾಂತೆಯರಿಗಭಯವನು ಕರುಣಿಸಿ
ಸಂತವಿಸಿ ಸಂಸಾರ ಧರ್ಮವಿದಂತುಟೆಂದಱುಪಿ
ಚಿಂತೆ ಬೇಡೆಂದೆನುತ ಮೃತನೃಪ
ಸಂತತಿಗಳಿಗೆ ಮಾಡಿಸಿದನವ
ರಂತರೂರ್ಧ್ವ ಕ್ರಿಯೆಗಳನು ನೆಱೆಸಾಂಪ್ರದಾಯಿಕವ ೩೯

ಬಿಡಿಸಿ ನೆಱೆಯನು ತಾಯಿತಂದೆಯ
ರಡಿಗೆಱಗಿ ಬಹುಕಾಲ ದುಃಖಂ
ಬಡಿಸಿದನಲಾ ಪಾಪಿ ನೆಱೆ ಸಂಕಲೆಗಳನು ಮಾಡಿ
ಬಿಡದೆ ತತ್ಫಲವೈಸಲೇ ಕೈ
ಯೊಡನೆ ಫಲಿಸಿತ್ತೆನುತ ಹರಿಬಲ
ರಡಿಗಡಿಗೆ ತಲೆದೂಗಿ ನೆನೆದರು ನಯನವಾರಿಯಲಿ ೪೦

ಕಡಿಸಿ ಸಂಕಲೆಗಳನು ಕಂಸನ
ಹಡೆದ ತಂದೆಯನುಗ್ರಸೇನನ
ಬಿಡಿಸಿ ಬಿಗುಹನು ದೇವಕನ ಹೆಡಗಯ್ಯ ಬಂಧನವ
ಪೊಡವಿಗಧಿಪತಿ ನೀನೆನುತ ಜಗ
ದೊಡೆಯರೊಡೆಯನು ಸಕಲ ಯಾದವ
ರೊಡನೆ ಸಲಿಸಿದನುಗ್ರಸೇನಂಗಾ ನೃಪಾಸನವ ೪೧

---

೭

# ಗುರುದಕ್ಷಿಣೆ

ಬಳಿಕ ವಿದ್ಯಾಮೂರ್ತಿಗಳು ಗುರು
ಕುಲನಿವಾಸವ ಬಯಸಿ ಕಾಶೀ
ನಿಲಯ ಸಾಂದೀಪಿನಿಯೆನಿಪ್ಪ ಮಹಾತ್ಮನಂತಿಕಕೆ
ನಳಿನನಾಭಾನಂತರೆಯ್ದಿದ
ರೊಲಿದವಂತೀಪುರದ ಗುರುಪದ
ಜಲರುಹಕೆ ತಲೆವಾಗಿ ಕಲಿತರು ವಿವಿಧ ವಿದ್ಯೆಗಳ ೧

ಅಕ್ಷಯರು ಗುರುವಿನಲಿ ಕಲೆಗಳ
ನೀಕ್ಷಿಸಿದರಿನ್ನೇನನೀವೆವು
ದಕ್ಷಿಣೆಗಳನು ಬೇಡಿಕೊಂಬುದು ನಮ್ಮ ಬಲವಱಿದು
[1]ಲಕ್ಷಣಂಬೆರೆಸಾ[1]ತ್ಮ ವಿದ್ಯೆಯು
ಶಿಕ್ಷಿಸಿದ ಗುರುವಿಂಗೆ ಕೊಡುವೆವು
ದಕ್ಷಿಣೆಯನಿನ್ನೇನನೆನುತೆಱಗಿದರು ಗುರುಪದಕೆ ೨

ಆ ಮಹಾತ್ಮರ ಬಿನ್ನಪವ ಸು
ಪ್ರೇಮದಲಿ ಕೇಳುತ್ತ ಮನದಲಿ
ಭೂಮಿಸುರನಾಳೋಚಿಸುತ ನಿರ್ಣಯವು ಕಾಣಿಸದೆ
ಭಾಮಿನಿಯ ಬೆಸಗೊಂಡಡೆಂದಳು
ತಾಮರಸಮುಖಿ ತನ್ನ ಮನದಲಿ
ರಾಮಕೃಷ್ಣರ ತೇಜವನು ಕಾಣುತ್ತ ಪತಿಯೊಡನೆ ೩

---

1 ಈಕ್ಷಣ ದೊಳಮರಾತ್ಮ

ತಂದು ಕೊಡಹೇಳಾಪಡೆನ್ನಯ
ನಂದನನ ತೀರ್ಥಕ್ಕೆ ಪೋಗಿರೆ
ಹೊಂದಿದಾತನನಾ ಪ್ರಭಾಸದಲಾ ಜಲಾಂತದಲಿ
ಬೆಂದೊಡ1ಲುಗಳ ಕಿಚ್ಚು ಮಾಣಲಿ1
ತಂದೆಗಳು ಸಾಮಾನ್ಯರಲ್ಲಿವ
ರೆಂದು ಸತಿ ಹೇಳಿದರೆ ಹೇಳಿದ ನಾತನಿವರೊಡನೆ ೪

ಉತ್ತಮರಿರೆನ್ನೊಡೆಯರಿರ ನಿಜ
ಚಿತ್ತವಲ್ಲಭರಿರ ನಿರೂಪವ
ಚಿತ್ತವಿಸುವುದು ಮಕ್ಕಳಿರ ಮಱಿಯಾನೆಗಳಿರನ್ನ
ತತ್ವ ಮೂರುತಿಗಳಿರ ಗುರುಕುಲ
ಕೃತ್ಯವನು ಮಾಡುವರೆ ತನ್ನಯ
ಸತ್ತಮಗನು ತಂದುಕೊಡಿ ನೀವೆಂದನಾ ವಿಪ್ರ ೫

ಎನೆ ಹಸಾದ ಭವಕೃಪಾಸಂ
ಜನಿತ ಸತ್ಯರಿಗಾವುದರಿದೆಂ
ದೆನುತ ಗುರುವನು ಬೀಳುಕೊಂಡೇಱಿದರು ಮಣಿರಥವ
ದನುಜಹರ ಬಲರಾ ಪ್ರಭಾಸಾ
ವನಿಯುನೆಯ್ದಿ ದರುದಧಿ ತೀರದ
ಲನುಪಮರು ಕುಳ್ಳಿರ್ದರಂದಾ ಲೋಕ 2ಪಾಲಕರು2 ೬

ಅದನಱಿದು ತನ್ನಾಳ್ದನೆಯ್ತಂದ
ದುದನು ಸಾಗರನಾಕ್ಷಣವೆ ಲೋ
ಕದಲಿ ಧನ್ಯನು ತಾನೆನುತ ನವರತ್ನನಿಕರವನು
ಪದಮುಳರ ಕಾಣಿಕೆಗೆ ತಂದಿ
ತ್ತೊದವಿದುತ್ಸವದಿಂದ ತನ್ನಯ
ಪದವ ನೋಲಗಿಸುತ್ತಲಿರಲಿಂತೆಂದನಸುರಾರಿ ೭

---

1. ಬೇಗೆಯನು ಕಳೆಯುಲಿ (ಖ) 2. ವಂದಿತರು (ಖ)

ಎಲವೊ ನಿನ್ನಯ ನೀರೊಳಗೆ ಮಡಿ
ದಳಿದವನನೀಕ್ಷಣವೆ ತಾ ನುಡಿ
ಬಳಿಕೆನಲು ಕೈಮುಗಿದು ನಾಗರನಾಥ ಭಕುತಿಯಲಿ
ತೊಲಗಿ ಬಿನ್ನವಿಸಿದನು ಕೊಲ್ಲೆನು
ಕೊಲುವರಿಗೆ ಮನಗೊಡೆನು ಗುರುಸುತ
ನಳಿವು ಪಂಚಜನಾಖ್ಯ ಶಂಬಾಸುರನಲಾಯ್ತೆಂದ ೮

ಇಹನು ತನ್ನೊಳಗವನು ದೇವರು
ಗಹನವೇ ಗುರುಸುತನ ಮಿಗೆ ಸಂ
ಗ್ರಹಿಸುವುದು ಬಲ್ಲಿದನು ಖಳನಮರಾಸುರೇಂದ್ರರಲಿ
ಅಹಡೆ ನೋಡುವುದೆನಲು ಹರಿಗಹ
ಗಹಿಸುತಾ ವರುಣಾಗ್ರ ಹಸ್ತ
ಗ್ರಹದಲಿಳಿದನು ಜಲಧಿಯಲಿ ಕಂಡನು ಮಹಾಸುರನ ೯

ಕಾಳಗದೊಳವನಸುವನಂತಕ
ನಾಲಯಕೆ ಕಳುಹುತ್ತ ಜಠರವ
ಸೀಳಿ ನೋಡಿದನಸುರರಿಪು ಗುರುಪುತ್ರ ನಿದ್ದಿರವಾ
ಆಲಿಸುತ ಕಾಣದೆ ಕೃತಾಂತನ
ಕೋಳು ವಿಡಿವೆನೆನುತ್ತ ರಿಪು ಕುಲ
ಕಾಲನುದ್ಧರಿಸಿದನು ಶಂಖವನಾತನಂಗದಲಿ ೧೦

ಉತ್ತರಿಸಿ ಸಾಗರವ ಬಲಪುರು
ಷೋತ್ತಮರು ರಥದಿಂದ ನಿಜಗುರು
ಪುತ್ರನನು ತರಲೆಂದು ಸಂಯಮಿನೀಪುರಾಂತರಕೆ
ಮತ್ತೆ ನಡೆತಂದರು ಪರಮ ಶಂ
ಖೋತ್ತಮವ ಮೊಳಗಿದರೆ ಕೇಳಿದ
ನೆತ್ತಣದು ರವವೆನುತ ಜವನೈತಂದನಿದಿರಾಗಿ ೧೧

ಬಂದು ಕಾಣಿಕೆಗೊಟ್ಟು ಚರಣ
ದ್ವಂದ್ವದಲಿ ಮೈಯಿಕ್ಕಿ ಮಿಗೆ ರವಿ
ನಂದನನು ನಯನಾಮೃತಾನಂದಾಬ್ಧಿಯಲಿ ಮುಳುಗಿ
ಕಂದೆಱೆದು ಕಮನೀಯ ಮೂರ್ತಿಗ
ಳಂದವನು ನೋಡುತ್ತ ಬಿನ್ನಹ
ವೆಂದು ಕರಪುಟವೆಸೆಯೆ ನುಡಿದನು ವಿನಯಪರನಾಗಿ ೧೨

ಕೃತ್ಯವಾವುದು ತನಗೆ ದೇವರು
ಚಿತ್ತವಿಸುವುದು ನಿಮ್ಮಡಿಗಳೇ
ನಿತ್ತ ಬಿಜಯಂಗೆಯ್ದಿರೆಂದಂಘ್ರಿಯಲಿ ತಲೆವಾಗಿ
ಭೃತ್ಯಭಾವದಲಿರಲು ಕಾರು
ಣ್ಯೋತ್ತರದ ಸುಪ್ರೇಮ ಸೂಕ್ತಿಯ
ಲುತ್ತಮೋತ್ತಮಮೂರ್ತಿ ಬೆಸಸಿದನಂದು ರವಿಸುತಗೆ ೧೩

ತಂದುಕೊಡು ಗುರುಪುತ್ರನನು ತನ
ಗಿಂದು ಮಾಳ್ಪಡೆ ಸೇವೆಯನು ನಿಜ
ಮಂದಿರದಲಿದ್ದವನ ನಾತ್ಮಕೃತಾಪರಾಧದಲೀ
ಬಂದೆವಾವಿದು ಕಾರಣದಲೆನ
ಲೆಂದನಾತನು ದೇವರಱಿಯರೆ
ತಂದು ಕೊಡುವೀಹದನನೆನಲಿಂತೆಂದನಸುರಾರಿ ೧೪

ಪ್ರಾರಬುಧವಶದಿಂದ ಜೀವರು
ಸೇರುವರು ನರಕಕ್ಕೆ ಬಲ್ಲೆನ
ದಾರು ತಪ್ಪಿಸಬಹುದು ತಾಹೊಱತಾಗಿ ಮೂಜಗಕೆ
ಆರೊಡೆಯರೆಲೆ ಮಗನೆ ಶಾಸಕ
ರಾರುತರ ಹೇಳಿದರೆ ತಹುದು ವಿ
ಚಾರಿಸಲು ತಾನೊಲಿದಡಾ ಪ್ರಾರಾಬ್ಧವಿಲ್ಲೆಂದ ೧೫

ಎನೆ ಹನಾದವೆನುತ್ತ ಗುರು ಪು
ತ್ರನನು ತಂದಿತ್ತಿನಜನಚ್ಯುತ
ನನುಪಮಾಂಘ್ರಿದ್ವಯುವ ಭಜಿಸುತ್ತಿರಲು ಭಕ್ತಿಯಲಿ
ದನುಜಹರ ಬಲರಾತನನು ಸಂ
ಜನಿತ ಕಾರುಣ್ಯದಲಿ ಬೀಳ್ಕೊಂ
ಡನಿಮಿಷಾರಾಧಿತರು ಬಂದರು ಮರಳಿ ಗುರುಗೃಹಕೆ ೧೬

ತಂದು ನಿಜಗುರುಪುತ್ರನನು ಗೋ
ವಿಂದ ರಾಮರು ದಕ್ಷಿಣೆಯನಿದೆ
ತಂದೆ ತಂದೆವು ನಿಮ್ಮಡಿಯ ಕಾರುಣ್ಯ ಶಕ್ತಿಯಲಿ
ಎಂದು ಕೈಯಲಿ ಕೊಟ್ಟು ಚರಣ
ದ್ವಂದ್ವದಲಿ ತಲೆವಾಗಿದರು ಮುಝು
ತಂದೆತಾಯ್ಗಳ ಹರುಷವನು ಹವಣಿಸುವರಾರೆಂದ ೧೭

ಕಾಲಿಗೆಱಗಿದ ರಾಮಕೃಷ್ಣರ
ಮೌಲಿಗಳ ನೆಗಹುತ್ತ ಹರುಷಾ
ಲೋಲನಯನಾಸ್ಪಂದ ಸಲಿಲಾಮೃತದಲೋಲಾಡಿ
ತೋಳುಗಳು ಮಿಗೆದಣಿಯಲಪ್ಪಿ ವಿ
ಶಾಲಮತಿ ಹರಸಿದನು ಪೃಥ್ವೀ
ಪಾಲರಾಗಿ ಪವಿತ್ರಕೀರ್ತಿಗಳಾಗಿ ನೀವೆನುತ ೧೮

ಭಕುತಿಯಲಿ ಬೀಳ್ಕೊಂಡು ಗುರುವನು
ಸಕಲ ಲೋಕೇಶ್ವರರು ಸಹಜ
ಪ್ರಕಟ ವಿದ್ಯರು ಬಂದರಾ ಮಧುರಾಪುರಕ್ಕೊಲಿದು
ಸಕಲ ಪುರಜನ ಬಂಧುವರ್ಗ
ಪ್ರಕರ ವಂದೊಲಿದಿದಿರುಗೊಳಲತಿ
ಸುಕೃತವನು ಸಲಿಸಿದರು ಬಲನಿತ್ಯಾತ್ಮರಭಿಜನಕೆ ೧೯

---

೮

## ಜರಾಸಂಧನ ಮುತ್ತಿಗೆ

ಚಿತ್ತವಿಸು ಭೂಪೋತ್ತಮಾಸ್ತಿ
ಪ್ರಾಪ್ತಿಯೆಂಬರಸಿಯರು ಕಂಸನ
ಮೃತ್ಯುವನು ಕಾಣುತ್ತ ನಿಜವೈಧವ್ಯ ವೇದನೆಯ
ಹೆತ್ತ ತಂದೆಗೆ ಹೇಳುವೆವೆನುತ
ತ್ತತ್ತು ಕಂಬನಿಗಡಲಲೋಲಾ
ಡುತ್ತ ಹರಿದರುಹಳವಿಸುತ ಮಗಧೇಂದ್ರನಿದ್ದೆಡೆಗೆ ೧

ಗೋಳಿಡುತ ವಸವಳಿದು ತಂದೆಯ
ಕಾಲಮೇಲಡಗೆಡೆದು ಬಱಿದಾ
ದೋಲೆಗಳ ಕಿವಿಗಳಲಿ ಕೆದರಿದ ಕೇಶಪಾಶದಲಿ
ಓಲಗದಲಬಲೆಯರು ಹೊರಳಲು
ಬಾಲಕಿಯರನು ನೆಗಹಿ ಹದನನು
ಕೇಳಿದನು ಚಿಂತಿಸುತ ತೂಗಿದನಡಿಗಡಿಗೆ ಶಿರವ ೨

ಅಕ್ಕಟಕಟೇನೇನು ಗೋಪನ
ಮಕ್ಕಳೇ ಕೊಂದವರು ಕಾಲಂ
ಗಕ್ಕುಳಿಸಲತಿಬಲಪರಾಕ್ರಮನನು ರಣಾಗ್ರದಲಿ
ಮಿಕ್ಕುಕಾದುವಡಮರರಿಗೆ ಕೈ
ಸಿಕ್ಕುವನೆ ಹಾಯೆನುತ ಕಣ್ಣಲಿ
ಮುಕ್ಕುಳಿಸಿದನು ಮಗಧಪತಿ ರೋಷಾಗ್ನಿಯುರವಣೆಯ ೩

ನಾಹಸಿಗನಿಪ್ಪತ್ತು ಮೂಱ
ಕ್ಷೋಹಿಣೀ ಬಲಸಹಿತ ಕೃತ ಸ
ನ್ನಾಹದಲಿ ಭಟನಿಕರ ಬಿಡೆ ಹೊಱವಾಳೆಯವನೊಲಿದು
ಆಹ ಜಗವಿದಯಾದವತ್ವವ
ಗಾಹಿನಲಿ ನಡೆಯೆನುತ ರಾಜ ಸ
ಮೂಹದಲಿ ಸಂಗ್ರಾಮ ಧೀರರದೇವ ಹೊಱವಂಟ ೪

ಮೇರೆದಪ್ಪಿ ಮಹಾಬ್ಧಿ ಭುವನಾ
ಹಾರಗೊಂಬಂದದಲಿ ಮಾಗಧ
ವೀರಬಲವಾರಾಶಿ ಕವಿತರುತಿರಲು ಪುರಜನದ
ಭೂರಿ ಸಂಕ್ಲೇಶವನು ಮಿಗೆ ದೈ
ತ್ಯಾರಿ ಕೇಳುತ ಶರಣಜನ ಸಂ
ನಾರಿಕನು ಮನದೊಳಗೆ ಮುನಿಜನವಂದ್ಯನಿಂತೆಂದ ೫

ಹರಿಸಿ ಭೂಭಾರವನು ಧರ್ಮವ
ಹೊರೆಯಲೆಂದವನಿಯಲಿ ತಾನವ
ತರಿಸಿದೆನಲಾ ಸಾಧುಸಜ್ಜನ ರಕ್ಷಣಾರ್ಥದಲಿ
ದುರುಳ ಮಾಗಧನಿಂದಲೇ ಸಂ
ಹರಿಸುವೆನು ನೃಪಸೈನ್ಯಮಯ ನಾ
ಗರವನಿದನೆಂದೆನುತ ನೆನೆದನು ತನ್ನಮನದೊಳಗೆ ೬

ಎನುತಿರಲು ಮಗಧೇಂದ್ರ ಸೇನಾ
ವನಧಿ ಹೊಕ್ಕುದು ನೂಕಿ ದಶದಿ
ಕ್ಕಿನಲಿ ಪುರದಲಿ ಗೋಪುರ ದ್ವಾರಂಗಳನು ಮುಱಿದು
ಕನಕ ತೋರಣ ಹರ್ಮ್ಯ ಕೃತ್ರಿಮ
ವನವ ನೊರಸಿ ಭಟಾಳಿ ಸಿಂಹ
ಧ್ವನಿಯ ದುರ್ಭರ ಕಹಳೆ ಭೇರಿಯ ಬಹಳ ರಭಸದಲಿ ೭

ಹಲಮುಸಲಮೆಂಬೆಱಡು ಕೈದುಗ
ಳಿಳಿದವಾ ಬಲಭದ್ರನಿದಿರಲಿ
ಹೊಳೆ ಹೊಳೆದು ದಶದಿಕ್ಕುಗಳನಳ್ಳಿಱಿವತೇಜದಲಿ
ಜಲಜದೃಶನಾಹಯರಥಾಸ್ತ್ರಾ
ವಳಿಗಳನು ಕಾಣುತ್ತ ನಗುತಾ
ಹಲಧರಂಗಿಂತೆಂದನಾ ಕಾಲೋಚಿತ ಕ್ರಮವ ೮
ನೋಡು ನೋಡೆಲೆಯಣ್ಣ ಬಂದುದು
ಕೇಡು ನಮ್ಮವರಿಂಗೆ ಭೂಪರ
ಬೀಡು ಬಿಟ್ಟಿದೆ ಮೃತ್ಯುಬಾಯ್ದೆಱೆದಂತೆ ನೀನಿದನು
ನೋಡುತಿಹುದಿನ್ನುಚಿತವೇ ಕೈ
ಮಾಡು ಕೈ ಮಾಡಿವೆ ರಥಾಯುಧ
ಜೋಡು ಸೇನಕಗಳು ಮಹಾಹವವಿಧಿತ ಸನ್ನಾಹ ೯
ಎಂದು ನೇಮಿಸುತ ಸುರಹರನಾ
ಸ್ಯಂದನವನೇಱಿದನು ಯಾದವ
ವೃಂದವನು ಕರೆಯೆನುತ ಹೊಱವಂಟನು ಮಹಾಹವಕೆ
ಸಂದ ಯಾದವ ವೀರರಿದೆ ನೀ
ವಿಂದು ನಿಲುವುದು ನಾಲ್ಕು 1ಬಾಗಿಲ1
ಮುಂದೆ ನಾಲ್ವರು ನಾಲ್ವರಾಹವಕೆಂದು ನೇಮಿಸಿದ ೧೦
ಹೊಕ್ಕರಸುರಾರಾತಿಗಳು ಪರ
ಚಕ್ರವನು ಹರಿಬಲರ ರಥದಿಂ
ದಿಕ್ಕೆಲಕೆ ಬಲಜಲಧಿತೆಗೆಯಲು ವೀರರುರವಣೆಗೆ
ಮಿಕ್ಕುಬರೆ ಮಗಧೇಂದ್ರನೀಕ್ಷಿಸಿ
ನಕ್ಕನಿವರೇ ರಾಮಕೃಷ್ಣರು
ಸಿಕ್ಕಿದರಲಾ ಯೆನುತ ಕೈವೀಸಿದನು ಕೆಲಬಲಕೆ ೧೧

1ದಿಕ್ಕನ1 (ಖ)

ಅವನಿಪತಿಕೇಳಾಮಹಾನೃಪ
ನಿವಹಬಲವಾರಾಶಿ ಬಲ ಮಾ
ಧವರ ಮುಸುಕಿದುದೇನ ಹೇಳುವೆನೆಂಟುದಿಕ್ಕಿನಲಿ
ತವತವಗೆ ಭಟನಿಕರ ಕವಿ ಕವಿ
ಕವಿಯೆನುತ ಗಜರಥ ಪದಾತಿಗ
ಳವಗಡಿಸಿತಾಹವದ ಜೋಡನೆ ಝೋಂಪಿಸಿತು ಜಗವ ೧೨

ಇರಲಿರಲು ಹರಿಬಲರು ನಿಮಿಷಾಂ
ತರಕೆ ಪರಬಲ ಜಲಧಿಯನು ದು
ರ್ಧರ ಮಹಾಸ್ತ್ರ ಪ್ರಕರವಡಬಾಗ್ನಿಯಲಿ ಸಂಹರಿಸಿ
ಪುರಜನಕೆ ಪರಿಜನಕೆ ಹರುಷೋ
ತ್ಕರುಷವನು ಮಾಡುತ್ತ ಶಂಖವ
ನಿರದೆ ಮೊಳಗಿದರಮರಚಯ ಜಯ ಜಯತು ಜಯಯೆನಲು ೧೩

ಕಾದಿ ಶಿಶುಪಾಲಾದಿ ತ್ರಿಂಶ
ನ್ಮೇದಿನೀಶರು ಜಾಱಿದರು ರಣ
ಮೇದಿನಿಗೆ ಮೈಗೊಡದೆ ಸಲೆ ಜೀವಾಭಿಲಾಷೆಯಲಿ
ಕೋದಕಣೆಗಳಲೊದಱಿದವು ಮೇ
ಲಾದ ಗಜಘಟೆತುರಗಪತ್ತಿಗ
ಳಾದುದವನಿಯ ಭಾರಸಂಕ್ಷಯ ವೊಂದುನಿಮಿಷದಲಿ ೧೪

ಬಿಟ್ಟುಕೊಂಡರು ನೃಪರು ಮಾಗಧ
ನಿಟ್ಟಕಿಚ್ಚಿದು ನಮ್ಮನೇ ತಗು
ಳ್ದಟ್ಟಿ ಸುಡುತಿದೆಯೆನುತ ಹೇಳದೆ ಕಂಡ ದೆಸೆಗಳಿಗೆ
ಘಟ್ಟುಗೆಡೆದುದು ರಾಯದಳ ಜಗ
ಜಟ್ಟಿ ರಾಮನ ಮುಸಲಹತಿಯಲಿ
ಕಟ್ಟೆಯೊಡೆದಂತರುಣಜಲ ಕಡಲಿಡಲು ಕಳನೊಳಗೆ ೧೫

ಕೆರಳಿ ರಥವೊಂದಱಲಿ ಕಂಗಳ
ಲುರಿಯನುಗುಳುತ್ತೊನಕೆಗಾಱನೆ
ಧುರಕೆ ನೀನನುವಾಗು ಫಡಫಡ ಕೈದುಗೊಳ್ಳೆನುತ
ಗಿರಿ ಗಿರಿಗೆ ಮಲೆವಂತೆ ಕರಿ ದಿ
ಕ್ಕರಿಗೆ ಕೈಗೊಡುವಂತೆ ಮಾಗಧ
ಧರಣಿಪಾಲಹಲಾಯುಧರು ಹಳಚಿದರು ತಮ್ಮೊಳಗೆ ೧೬

ಬಲವನವಱಿದ ಗರ್ವಗಿರಿಗಿದೆ
ಕುಲಿಶವೆನುತ ಮಹಾಗದೆಯ ಬರ
ಸೆಳೆದು ತಿರುಹಿ ಸಹಸ್ರಗುಣವೆನಲಾರ್ದುಬೊಬ್ಬಿಱಿದು
ಹಲಧರನ ವಕ್ಷಃಸ್ಥಳವ ಸಿಡ
ಲಲಘು ಗದೆಯನು ವಂಚಿಸುತ ನಿ
ಷ್ಫಲವ ಮಾಡಿದನಾ ರಣಾರಂಭವನು ಬಲರಾಮ ೧೭

ಕೈದುಗೊಳ್ಳೆನ್ನೊಮ್ಮೆ ತಾದಿಟ
ಕೈದುಗೊಂಡರೆ ನಿನ್ನ ಹೆಂಡಿರಿ
ಗೈದೆತನಕವಸಾನವಿದೆ ಕೊಳ್ಳೆನುತ ಮುಸಲದಲಿ
ಹೊಯ್ದುಡಾತನ ರಥ ಹಯಂಗಳು
ಹಾಯ್ದುವಂತಕಪುರಕೆ ಸಾರಥಿ
ಬಿದ್ದಸವನಿಯಲೊಡಲನದ್ದಿದು ರಥಧರಿತ್ರಿಯಲಿ ೧೮

ವಿರಥನನು ಮಾಡಿದನು ನಿಮಿಷಾಂ
ತರದಲಿಲವೋ ಹೋಗೆನುತ ಹಲ
ಧರನು ಹಗೆಯನು ಜೀವಮಾತ್ರವನುಳಿಹಿ ಬೀಜವನು
ಹುರಿಯಲಾಗದೆನುತ್ತ ರಥವನು
ತಿರುಗಿಸಲು ಮಗಧಾಧಿಪತಿ ದು
ರ್ಭರದ ಲಜ್ಜಾಭಾರದಲಿ ಮರಳಿದನು ನಿಜಪುರಿಗೆ ೧೯

ಮರಳಿದರು ಪರಬಲ ಮಹಾ ಸಾ
ಗರವನದನುತ್ತರಿಸಿ ವಿನುತಾ
ಭರಣವಾಹನ ವಸ್ತುಕೋಶಂಗಳನು ಸಂಗ್ರಹಿಸಿ
ಪುರಕೆ ಸಂತೋಷದಲಿ ಸುರರಂ
ಬರದಲುಲಿಯಲು ರಾಮಕೃಷ್ಣರು
ದರುಶನವನಿತ್ತಖಿಳ ಪುರಜನವಿದಿರುಗೊಳುತಿರಲು ೨೦

ಧರಣಿಪತಿ ಕೇಳಿತ್ತಲಚ್ಯುತ
ನಿರದೆ ತನ್ನನು ಸದೆದು ನೃಪರನು
ಪರಿಭವಿಸಿ ಸಪ್ತಾಂಗವನು ಕೊಳಲಾದ ಭಂಗದಲಿ
ಪುರವ ಹೊಗದಾ ಮಗಧಪೃಥ್ವೀ
ಶ್ವರಸು ಚಿಂತಿಸಿ ಹೋದನಸುರೇ
ಶ್ವರನೆನಿಪ ಬಾಣಾಸುರನ ಶೋಣಿತ ಪುರಾಂತರಕೆ ೨೧

ಬರವ ಕೇಳುತ ಸಕಲ ದೈತ್ಯೇ
ಶ್ವರರ ಸಹಿತುತ್ಸವದಲವನೀ
ಶ್ವರನನಂದಿದಿರುಗೊಂಡು ಮಂಗಲ ವಾದ್ಯಘೋಷದಲಿ
ಪರಮ ಸಿಂಹಾಸನವನಿತ್ತು ಪ
ಚರಿಸಿ ಕೈ ಮುಗಿವುತ್ತ ಲವನೀ
ಶ್ವರರ ಮಂಡಲಸಹಿತ ಬಹ ಕಾರಣವಿದೇನೆಂದ ೨೨

ಎಂದಡೆಲೆ ದೈತ್ಯಾಧಿಪತಿ ಕೇ
ಳಿಂದು ತನ್ನಯ ಭಂಗವನು ಗೋ
ವಿಂದನೆಂಬವನೊಬ್ಬಗೋಪನಧರ್ಮದಲಿ ನೃಪರಾ
ವೃಂದವನು ಪರಿಭವಿಸಿ ಮಡಿಹಿಸಿ
ಕೊಂದನುನ್ನತ ಕೋಶವಾಹನ
ದಿಂದ ಸರ್ವಾಂಗವನು ಕೊಂಡನು ತಂದೆ ಕೇಳೆಂದ ೨೩

ದಿಕ್ಕರಿಗೆ ಸಮವೆನಿಪ ಗಜಘಟೆ
ಸಿಕ್ಕಿದವು ಕುದುರೆಗಳು ತೇರ್ಗಳು
ಪುಕ್ಕಟೆಯಲೇ ಪರರಿಗಾದವು ಹೇಳಲೇನದನು
ಮಿಕ್ಕ ಸಂವರಣೆಗಳ ಸರಕಿನ
ಲೆಕ್ಕವದನಾರಱಿವರಿದ್ದುದ
ನಿಕ್ಕಿಬಂದೆನು ಸಮರ ಸರ್ವಸ್ವವನು ತಾನೆಂದ ೨೪

ತಾನಿದಕೆ ಚಿಂತಿಸುವನಲ್ಲೀನ
ಗೀ ನೃಪರು ನೆರವಾಗಿ ಕೆಟ್ಟರು
ಮಾನದಿಂದರ್ಥಂಗಳಿಂದಸುವಿಂದ ಸಂಗರದ
ಮಾನನೀಯರು ಭಂಗವಡೆದರು
ಹೀನರಲಿ ಸುಡಲಿನ್ನು ಬದುಕಿನ
ಲೇನುಫಲ ವಿಪರೀತ ಕಾಲಕ್ರಮವಲಾಯೆಂದ ೨೫

ಎಂದಡೈಸಲೆ ಸಾಕು ನುಡಿಯದಿ
ರೆಂದು ತಕ್ಕೈಸುತ್ತ ತೋಳ್ಗಳ
ವೃಂದದಲಿ ಬಲಿಸುತನಶೇಷನೃಪಾಲ ಕುಲಸಹಿತ
ಮಂದಿರಕೆ ಬಾಯೆನುತ ಕೈವಿಡಿ
ದಂದು ನಿಜರಾಜಾಲಯದಲಾ
ನಂದದಿಂದರ್ಚಿಸಿದನವನೀಶ್ವರರನುಚಿತದಲಿ ೨೬

ಇತ್ತೆನಿದೆ ಕೊಳ್ಳೆನುತ ಮುದದಲಿ
ಮತ್ತಗಜ ಸಂದೋಹದೊಳಗಱು
ವತ್ತು ಸಾವಿರ ಗಜಂಗಳನು ಸಪರಿಚ್ಛದಂಗಳನು
ಇತ್ತನೊಂದೇ ಲಕ್ಷರಥವನು
ಹತ್ತು ಲಕ್ಷ ತುರಂಗಮಂಗಳ
ನಿತ್ತ ನಿಚ್ಛಾಗತಿಗಳನು ದೈತ್ಯೇಂದ್ರನವನಿಪಗೆ ೨೭

ಮತ್ತೆ ಮಾಯಾವಿದರೆನಿಪ ದೈ
ತ್ಯೋತ್ತಮರ ಮುನ್ನೂಱುಮಂದಿಯು
ನಿತ್ತನಾತ್ಮಸಮಾನರನು ಸಂಗರ ವಿಶಾರದರ
ಮತ್ತೆ ಹಲ್ಲಣ ಹಕ್ಕರಿಕೆಗಳ
ಶಸ್ತ್ರ ಸೀಸಕ ಕವಚವೆಂಬಿವ
ನಿತ್ತನಸುರನಸಂಖ್ಯವೆನಲವನೀಶ್ವರಂಗೊಲಿದು ೨೮

ಮಂತ್ರಿಗಳನಿಬ್ಬರನು ನಿಜತಳ
ತಂತ್ರರಕ್ಷೆಗೆ ಕೊಟ್ಟನಮರಕು
ಲಾಂತಕನು ಕುಂಬಾಂಡನನುವರ ಶೂರ್ಪಕರ್ಣನನು
ಇಂತು ಸಂಭೃತಸಮರಸಾಧನ
ನಂತಕನವೊಲು ಮಗಧ ಪೃಥ್ವೀ
ಕಾಂತನಾ ಬಾಣಾಸುರನ ಬೀಳ್ಕೊಂಡು ಹೊಱವಂಟ ೨೯

ಬಂದನೇ ಮಾಗಧನು ಪುನರಪಿ
ತಂದನೇ ಕದನವನು ಲೇಸಾ
ಯ್ತೆಂದು ಕರೆಸಿದನಸುರರಿಪು ಯಾದವಮಹಾಭಟರ
ವೃಂದವನು ಸನ್ನಾಹಭೇರಿಗ
ಳಂದು ಮೊಳಗಲು ಕಾಳೆಗಕೆ ರಥ
ದಿಂದ ಮುಸಲಾಯುಧಸಹಿತ ಹೊಱವಂಟನುರವಣಿಸಿ ೩೦

ಪುರವ ಹೊಱವಂಟಸುರರಿಪು ಸಂ
ಕರುಷಣರು ಸಂಗರಕೆ ಶಂಖವ
ನಿರದೆ ಮೊಳಗಿಸಿ ಮದಗಜಂಗಳವೋಲು ಪರಬಲವ
ಬೆರಸಿದರು ಘನ ಸಿಂಹನಾದದ
ಲುರವಣಿಸಿ ಬಹಳಾರ್ಣವದ ಮಂ
ದರಗಳಂತೆಸೆದರು ನೃಪಾಲ ಕದಂಬ ಮಧ್ಯದಲಿ ೩೧

ಬಂದರೇ ಗೋಪಾರ್ಭಕರು ಗೋ
ವಿಂದ ರಾಮರು ಕವಿಯೆನುತ ನೃಪ
ವೃಂದ ಕವಿದುದು ಮೇಲೆ ಗುರುಡಧ್ವಜವನೀಕ್ಷಿಸುತ
ಇಂದುವನು ಕಾರ್ಮುಗಿಲು ಮಿಗೆ ಕವಿ
ವಂದದಲಿ ಶರನಿಕರ ವೃಷ್ಟಿಗ
ಳಿಂದ ವಿಶ್ವಂಭರನ ಮುಸುಕಿದರೊಂದು ನಿಮಿಷದಲಿ ೩೨

ದಿಗ್ಗಜಂಗಳು ಸಸಿನವಾದವು
ತಗ್ಗಿದಹಿಪನ ಹೆಡೆಗಳಿದ್ದವು
ಮುಗ್ಗಲನು ಮುಗುಚಿದನು ಕಮಠನೆನಲ್ಕೆ ಪರಬಲವ
ನುಗ್ಗನುಸಿಯನು ಮಾಡಿದುವು ಮುನಿ
ವರ್ಗವಂದ್ಯನ ತೀವ್ರತರ ಶರ
ವರ್ಗವೇನಚ್ಚರಿ ಕೃತಾಂತ ಕೃತಾಂತ ಮೂರ್ತಿಯಲಿ ೩೩

ಮುರಿದುದೇ ಮುಂಗುಡಿ ಕೃತಾಂತನ
ಹೊರದುದೋ ಸಾಗರದೊಳಗೆ ಮಳೆ
ಗಱೆದುದೋ ಹುರುಡೇಕೆ ಗುಣದಲಿ ಕೃಷ್ಣನೀಜಗಕೆ
ಉಱುವ ವೀರರ ದೇವನೆನುತ
ಬ್ಬಱಿಸಿ ಪಡೆಬಾಯ್ಬಿಡಲು ಕವಿದರು
ಕಱಿಮನದ ರಕ್ಕಸರು ಮೂನೂರ್ವರು ಮಹಾಹವಕೆ ೩೪

ಕವಿಸಿದರು ಮಾಯೆಗಳನಾ ಯಾ
ದವರ ಬಲ ಕಂಗೆಡಲು ದೈತ್ಯ
ಪ್ರವರ ಭಟರಾವರಿಸಿ ಗಜರಥತುರಗಪತ್ತಿಗಳ
ಸವೆಯೆ ಸವಱುತ್ತಿರಲು ಕರುಣಾ
ರ್ಣವನು ವಿಜ್ಞಾನಾಸ್ತ್ರದಲಿ ಪರಿ
ಭವಿಸಿದನು ದಾನವರ ಮಾಯೆಯ ನೊಂದುನಿಮಿಷದಲಿ ೩೫

ಮುಱಿದುದಸುರರಚೂಣಿ ಬೆನ್ನಲಿ
ತುಱುಗಿದವು ತೂಳಿದವು ಹೊಸಹೊಂ
ಗಱಿಯ ಕಣೆಗಳು ಜಾಱಿದರು ದಾನವ ಮಹಾಭಟರು
ನೆಱೆ ನಿರಾಶ್ರಯವಾಯ್ತು ಬಲವೆಂ
ದೊಱಲಿದುದು ನೃಪಕಟಕ ಸಮರದ
ಸೆಱಗ ಹಿಡಿದರು ಬಾಣಮಂತ್ರಿಪ್ರವರರುರವಣಿಸಿ ೩೬

ಅತ್ತಲನ್ನೆಗ ಮಗಧನೃಪನೆಡೆ
ಹೊತ್ತಿದುದು ಹಲಧರನನೀಕ್ಷಿಸು
ತೆತ್ತಿದಂತಸ್ತಾನಶಿಖಿಯಲಿ ಪೂರ್ವಭಂಗದಲಿ
ಕೆತ್ತಿದವು ಮೀಸೆಗಳು ಕಂಗಳು
ಹೊತ್ತುವರುಣಚ್ಛವಿಯ ನೈತಹ
ಮೃತ್ಯುವಿನವೋಲಿದಿರುಗೊಂಡನು ಹಲಧರನ ರಥವ ೩೭

ಎಲೆಲೆ ಹಿಡಿಹಿಡಿ ಮುಸಲವನು ನೇ
ಗಿಲನು ತೆಗೆ ನಿಜಬಾಹುಸತ್ವದ
ಬಲುಹ ತೋಱಿನ್ನೊಡನೆ ರಿಪುಭಂಜನದ ಸಾಹಸವ
ಅಳವ ತೋಱಾ ತೋಱು ನಿನ್ನಯ
ತಲೆಗೆ ಗದೆಯನು ತೊಡದ ಮುನ್ನವೆ
ಕಲಿತನಕೆ ಬಳಿಕಿಲ್ಲ ತೆಱಹೆನುತದಟ ಮಾರಾಂತ ೩೮

ಲೇಸುಮಾಡಿದೆ ತನ್ನ ತೋಳ್ಗಳಿ
ಗೇಸು ಜನ್ಮಾಂತರದ ಪುಣ್ಯದ
ರಾಶಿಯೋ ಫಲಿಸಿತ್ತು ಸಂಗ್ರಾಮದಲಿ ನೀನೆಂಬ
ಸಾಸಿಗನು ದೊರೆಕೊಂಡೆಯೆನುತತಿ
ರೋಷವಿಹ್ವಲನೇತ್ರನುಗಿದನು
ಭಾಸುರದ್ಯುತಿಯೆನಿಪ ಮುಸಲವನಾಹವಾಗ್ರದಲಿ ೩೯

ತಿರುಹಿ ಸಾವಿರ ಸುತ್ತನಭ್ರದ
ಲುರಿಯನುಗುಳುವ ಕಾಲದಂಡವ
ತಿರುಹುವಂತಕನಂತೆ ಧೂಮಜ್ವಾಲೆ ದೆಸೆದೆಸೆಗೆ
ಭರಿತವಾಗಲು ಸಕಲ ದಿಗಧೀ
ಶ್ವರರು ಭಾಪೆನೆ ಮುಸಲದಲಿ ನೃಪ
ವರನನಪ್ಪಳಿಸಿದನು ಮೊಳಗುವ ಸಿಂಹನಾದದಲಿ ೪೦

ಚಿತ್ತವಿಸು ಭೂಪಾಲ ತೆರಳುವ
ದೈತ್ಯ ಬಲವನು ಕೃಷ್ಣಸಾಹವ
ದತ್ಯಧಿಕ ಸಾಹಸವನಾ ನೃಪಕುಲ ಪಲಾಯನವ
ಮತ್ತೆ ತಾಳಧ್ವಜನ ತನುಬಲ
ವುತ್ತರೋತ್ತರವಾಯ್ತು ಮಗಧ ನೃ
ಪೋತ್ತಮನು ಮನಗುಂದಿದನು ಜಯವಿಲ್ಲ ತನಗೆನುತ ೪೧

ಫಡಫಡೆಲವೋ ಬೀಳೆನುತಲಾ
ಹಿಡಿದು ತಲೆಯನು ರಾಮನವನಿಗೆ
ಕೆಡಹಿ ಕೋಪಾಟೋಪದಲಿ ಮಾಗಧನ ಮಸ್ತಕವ
ಹೊಡೆಯಲೆತ್ತಿದನರಿಭಟರು ಬೊ
ಬ್ಬಿಡಲು ಮುಸಲವನನ್ನೆಗಾಗಸ
ದೆಡೆಯಲಾದುದು ರಭಸವಾ ಬಲಭದ್ರನಿದಿರಿನಲಿ ೪೨

ರಾಮ ಬಿಡುಬಿಡು ಸಾವನಲ್ಲೀ
ಭೂಮಿಪತಿ ತೆಗೆ ಮುಸಲವನು ನೀ
ಕ್ಷೇಮದಲಿ ನಡೆ ಪುರಕೆ ಕೊಲಲರಿದೀತನನು ನಿನಗೆ
ಸೌಮನಸ್ಯದಲಾಯ್ತಲಾ ಸಂ
ಗ್ರಾಮಜಯವಿದು ಸಿನ್ನದೆನುತಾ
ವ್ಯೋಮತಳದಲಿ ನುಡಿದುದಶರೀರೋಕ್ತಿ ಸಿಡಿಲಂತೆ ೪೩

ಬಿಟ್ಟನದಕೇಳುತ್ತ ನೃಪನನು
ಕೊಟ್ಟಿನಸುವಿನ ದಾನವನು ನಿನ
ಗಿಟ್ಟಿಕೋ ಬುದ್ಧಿಯನು ತಲೆಯಲಿ ಭಂಡ ಹೋಗೆನುತ
ಪಟ್ಟಣಕೆ ಮರಳಿದನು ರಥದಲಿ
ಮೆಟ್ಟಿ ನೋಡುತ ರಾಯರಾಯರ
ಥಟ್ಟಿಗಳನತಿರೌದ್ರರಣರಂಗವನು ಹರುಷದಲಿ ೪೪

ಇತ್ತಲಸುರಾರಾತಿ ವೈರಿ ಜ
ಯೋತ್ತರದ ಸಂತೋಷದಲಿ ಶಂ
ಖೋತ್ತಮವನೋರಂತೆ ಮೊಳಗಿಸಿ ಸಕಲ ಬಲಸಹಿತ
ಉತ್ತರಿಸಿ ಸಮರಾಬ್ಧಿಯನು ಸಂ
ವೃತ್ತನಾದನು ಪುರಕೆ ನಭದಲಿ
ಕೃತ್ತಿವಾಸವಿರಿಂಚಿ ಮುಖ್ಯಾಮರರು ಜಯಯೆನಲು ೪೫

ಸಂದಣಿಪ ಮಾಗಧರ ಸೂತರ
ವಂದಿಗಳ ಕಳಕಳದ ಮೊಳಗುವ
ದುಂದುಭಿಯ ದುರ್ವಾರ ಶಂಖ ಮೃದಂಗ ನಿಸ್ವನದ
ಸಂದ ಬಿರುದಿನ ಕಹಳೆಗಳ ರವ
ದಿಂದ ದೆಸೆಮಾರ್ಮೊಳಗಲಂದರ
ವಿಂದನಾಭನು ಪುರವ ಹೊಕ್ಕನು ವಿದಿತ ವಿಭವದಲಿ ೪೬

ಕಾಳಗವನೀಪರಿಯ ಮಗಧ ಭೂ
ಪಾಲನಲಸದೆ ಬಹಳ ವೃದ್ಧಿಯೆ
ಪಾಲಬಲದೊಡನೆಸಗಿ ಕೃಷ್ಣಪರಾಕ್ರಮಾಗ್ನಿಯಲಿ
ಬೇಳಿದನು ತಳತಂತ್ರವನು ಹದಿ
ನೇಳು ಬಾರಿ ದಿಶಾಗಜಂಗಳ
ಮೌಳಿಗಳು ತವೆನೆಗೆಯಲಪಗತ ಭೂಮಿ ಭಾರದಲಿ ೪೭

ಮತ್ತೆ ಹದಿನೆಂಟನೆಯ ಸಮರಕೆ
ವಿತ್ತವನು ಸಂವರಿಸಿ ಮಗಧ ನೃ
ಪೋತ್ತಮನು ಬಹ ಸಮಯವಾಗಿರಲಾಯ್ತು ಮತ್ತೊಂದು
ವೃತ್ಯ ಮಧುರಾಪುರಕೆ ನಾರದ
ನಿತ್ತ ಕುಱುಹಿನಲಾಹವವನಱಿ
ಸುತ್ತ ಬಂದನು ಕಾಲಯವನಾಹ್ವಯನು ಬಲಸಹಿತ ೪೮

ದನುಜಹರನೆಯಿತಂದನೊಪ್ಪುವ
ಕನಕ ರಥದಿಂದಿಳಿದು ಸಿಂಹಾ
ಸನಕೆ ರತುನದ ಚಾವಡಿಯ ಪರಿಮಿತದ ಚವುಕಿಗೆಗೆ
ಜನಪಕೇಳಾಳೋಚನೆಯ ಮನ
ಜನಿಸಿ ಕುಳ್ಳಿರ್ದಮಳಮಂತ್ರಿಗ
ಳನುವ ನಱಿವೊಲವಿಂದ ನಯಕೋವಿದರಿಗಿಂತೆಂದ ೪೯

ಬಂದುದ್ದೈ ನಮಗಖಿಳರಾಯರ
ವೃಂದದೊಡನೆ ವಿರೋಧ ಪುಣ್ಯದ
ಲಿಂದು ಕಳೆದೆವು ವೈರಿಬಲಸಂಗ್ರಾಮ ಸಾಗರವ
ನೊಂದಿರೆಲ್ಲರು ಮಗಧ ಭೂಪನ
ದಂದುಗಕೆ ನೋಡುವೆವು ನಾವಿ
ನ್ನೊಂದು ಪರದುರ್ಭೇದ್ಯವಹ ದುರ್ಗೋತ್ತಮುವನೆಂದ ೫೦

ದುರ್ಗದೊಳಗತಿಲೇಸು ಗಿರಿಜಲ
ದುರ್ಗ ಸಪ್ತಾಂಗಂಗಳೊಳಗತಿ
ದುರ್ಗವಲ್ಲೈ ನೋಡುವರೆ ಮುಖ್ಯಾಂಗವಾಹವಕೆ
ಅಗ್ಗಳೆಯನೀ ಮಗಧಪತಿ ನೃಪ
ವರ್ಗವೆಯಿದೆ ಸಹಾಯವಾತಂ
ಗೆಗ್ಗತನವನುಮಾಡಿ ನಾವಿಹುದುಚಿತವಲ್ಲೆಂದ ೫೧

ನೋವೆ ನಾನೆನ್ನವರು ನೊಂದಡೆ
ನೋವು ದಿಟಕೆನಗಿಲ್ಲ ಸೇವಕ
ಜೀವಭರಣವ ಮಾಳ್ಪುದೇ ಕರ್ತವ್ಯವೆನಗೆನುತ
ಶ್ರೀವಧೂವರನಖಿಳಮಂತ್ರಿ ಜ
ನಾ ವಸಿತ ಮಂತ್ರದಲಿ ಕಳಿದು ವಿ
ಭಾವರಿಯನಗ್ರಜ ಸಹಿತ ಪುರವರವ ಹೊಱವಂಟ ೫೨

ಪುರವ ಹೊಱವಂಟಸುರರಿಪು ಸಂ
ಕರುಷಣಾನ್ವಿತನಾಗಿ ನಡೆದನು
ಪರಿಮಿತದಲಂಭೋನಿಧಿಯ ನಿರರುತಿಯ ದಿಕ್ಕಿನಲಿ
ಶರಧಿಯಲಿ ಯೋಜನದ ಸೇತುವ
ವಿರಚಿಸಿದನೆಯ್ದಿದನು ಬಳಿಕಾ
ವರಕುಶಸ್ಥಲಿಯನು ಸಮುದ್ರ ಜಲಾವಕುಂಠಿತವ ೫೩

ಹನ್ನೆರಡು ಯೋಜನದ ಪುರ ಸಂ
ಪನ್ನವಾದುದು ವಿಶ್ವಕರ್ಮನ
ಬಿನ್ನಣದ ಬಹು ಚಿತ್ರರತ್ನಾವಳಿಯ ರಚನೆಯಲಿ
ಹೊನ್ನ ಕಳಶಂಗಳಲಿ ಮಣಿಸೌ
ವರ್ಣ ಭವನಂಗಳಲಿ ರಜತ ಶಿ
ಲೋನ್ನತೋನ್ನತ ಹರ್ಮ್ಯ ನಿಕರಂಗಳಲಿ ರಂಜಿಸಲು ೫೪

ಹೊಳೆವ ಮಣಿ ಭಿತ್ತಿಗಳ ಮುಕ್ತಾ
ವಳಿಯ ಮೇಲ್ಕಟ್ಟುಗಳ ಪಟ್ಟಾ
ವಳಿಯ ಗುಡಿಗಳ ಹೊನ್ನ ತೊಡಿಗೆಯ ತೋರಣಾವಳಿಯ
ಥಳಥಳಿಪ ಹರಿನೀಲ ರತ್ನ
ಸ್ಥಳದ ಮಣಿ ಸೋಪಾನ ಪಂಕ್ತಿಯ
ತಿಳಿಗೊಳದ ಸಿರಿ ಸೂಱೆಗೊಂಡುದು ಹರಿಬಲರ ಮನವ ೫೫

ದ್ವಾರವತಿಯೆಂದಾಯ್ತು ಹೆಸರಾ
ಶ್ರೀರಮಣ ನಿರದಿಟ್ಟ ಹೆಸರಲಿ
ಪೂರುವದಲೇ ವರ ಕುಶಸ್ಥಲಿ ಭುವನ ವಿಖ್ಯಾತ
ಭೂರಮಣ ಕೇಳಾವ ಮಾಯಾ
1ಧಾರ1ಯೋಗಾಂಬುಧಿಯೊ ತುಂಬಿದ
ನೂರನೊಂದೇನಿಮಿಷದಲಿ ನಿಜಬಂಧುವರ್ಗದಲಿ ೫೬

೯

## ರುಕ್ಮಿಣೀ ಕಲ್ಯಾಣ

ಕೇಳು ನೃಪ ಭೀಷ್ಮಕನೆನಿಪ್ಪ ನೃ
ಪಾಲನೆಸೆದನು ಕುಂಡಿಕಾಖ್ಯ ವಿ
ಶಾಲಪುರದಲಿ ವಿಪುಳಕೀರ್ತಿ ವಿದರ್ಭದೇಶದಲಿ
ಹೇಳುವಡೆ ಪಂಚಾತ್ಮಜರು ಕುಲ
ಪಾಲಕರು ಜನಿಸಿದರು ಕಡೆಯಲಿ
ಬಾಲೆಯೊಬ್ಬಳು ಜನಿಸಿದಳು ರುಕ್ಮಿಣಿ ಸಮಾಖ್ಯೆಯಲಿ ೧

ಕೇಳಿದಳು ರುಕ್ಮಿಣಿ ಮುಕುಂದನ
ಶೀಲಗುಣ ಮಾಧುರ್ಯ ಶೌರ್ಯ ವಿ
ಶಾಲರೂಪೌದಾರ್ಯರಕ್ಷಿಸ್ಮಿಯನತುಳಸಾಹಸವ
ಲೋಲಲೋಚನೆ ಗಾಯಕರ ಮುಖ
ಲಾಲಿತದ ಚರಿತವನು ಕಾಮನ
ಬೇಳುವೆಗೆ ಬೆಂಡಾದಳಚ್ಯುತಪಾರವಶ್ಯದಲಿ ೨

1ಪಾರ1 (ಖ)

ಆ ಪರಮ ಮಾನಿನಿಯ ನಿರ್ಮಲ
ರೂಪುಗುಣ ಮಾಧುರಿಯ ಲಕುಮಿಯ
ನಾಪರಿಯಲಾ ಗಾಯಕರ ಮುಖದಿಂದ ನೆಱೆಕೇಳಿ
ಶ್ರೀಪತಿಯ ಚಿತ್ತದಲಿ ಮನುಮಥ
ರೂಪುಗೊಂಡನು ಬಳಿಕ ತತ್ಕೃತ
ತಾಪದಲಿ ತತ್ಸಿದ್ಧಿ ಕಾಮುಕನಾದನಸುರಾರಿ ೩

ಮದುವೆ ನಾಡಿದು ತಂಗಿ ಸುಯಿಧಾ
ನದಲಿರಲಿ ಶಿಶುಪಾಲನೀಕೆಗೆ
ಮದನನಾಮುರವೈರಿ ತನಗೆ ವಿರೋಧಿಯೆಂದೆನುತ
ಮದಮುಖನು ನೆರಹಿದನು ನೃಪರನು
ಕದನಗಲಿಗಳನಾಹಿತೋತ್ಸಾ
ಹದಲಿ ತರಿಸಿದನಖಿಳ ವೈವಾಹಿಕದ ಸಾಧನವ ೪

ಅದನಱಿದು ವೈದರ್ಭಿ ತನ್ನಯ
ಹೃದಯದಲಿ ಸಂತಾಪವನು ತಾ
ಳಿದಳು ಪುಣ್ಯವಿಹೀನೆಯಾದೆನಲಾ ದುರಾತ್ಮಕನ
ಉದರ ಸಮಿತಿಯಲೇಕೆ ಸಂಜನಿ
ಸಿದೆನು ತಾನಲ್ಲದಡೆ ನೇರೆನೆ
ಪದಮಳನ ಸಿರಿಚರಣ ಸೇವೆಗೆನುತ್ತ ಹಲುಬಿದಳು ೫

ಕರೆದು ವಿಪ್ರೋತ್ತಮನನೊಬ್ಬನ
ನಿರದೆ ಬೆಸಸಿದಳಾಪ್ತನನು ಪಂ
ಕರುಹಮುಖಿ ಬಳಿಕಾದುದಾಗಲಿ ನೋಡುವೆನು ಕಳುಹಿ
ದೊರಕದಿರ್ದಡೆ ನಿಜಮನೋರಥ
ಪರಿಹರಿಸಿ ಜೀವವನು ಜನ್ಮಾಂ
ತರಕೆ ಪಡೆವೆನು ಪರಮಪುರುಷನ ಸನ್ನಿಧಿಯನೆನುತ ೬

ಕಳುಹಿದಳು ಕೃಷ್ಣಾಂಘ್ರಿ ಸನ್ನಿಧಿ
ಗೊಲಿದು ವಿಪ್ರೋತ್ತಮನಸಾತನು
ಚಳಿಯದಲಿ ನಡೆತಂದು ಹೊಕ್ಕನು ದ್ವಾರಕಾಪುರಿಯ
ತಿಳಿದು ಕಾರ್ಯವಿಶೇಷವನು ಪಡಿ
ವಳರು ಹುಗಿಸಲು ಬಂದು ಕಂಡನು
ಲಲಿತ ಸಿಂಹಾಸನದಲೆಸೆವ ಮುಕುಂದನಂಘ್ರಿಗಳ ೭

ಅಮಿತ ಕರುಣಾಸಿಂಧು ಮಾರ್ಗ
ಶ್ರಮವಡಗಲಾದರಿಸಿ ವಿಪ್ರೋ
ತ್ತಮನನಮೃತಾಹಾರ ಭೋಜನ ಪಾನದಲಿ ದಣಿಸಿ
ಕಮಲನಾಭನು ನಗುತ ನುಡಿಸಿದ
ನಮಳ ದಂತದ್ಯುತಿಗಳಿರದಾ
ಕ್ರಮಿಸಲಧರದ್ಯುತಿಗಳನು ಸತ್ಪ್ರೇಮ ಸೂಕ್ತಿಯಲಿ . ೮

ಬರಲಿದೇನು ನಿಮಿತ್ತ ನೀನಿದ
ನೊರೆವುದಧಿಕ ರಹಸ್ಯವಲ್ಲದ
ಡುರುತರಶ್ರಮದಿಂದ ಬಂದೆ ಸುದೂರ ಪಥದಿಂದ
ಹರಹರಾವುದು ಕೃತ್ಯವದನೆನ
ಗೊರೆದು ಮಾಡಿಸಿಕೊಂಬುದಾಮ್ಕಿಂ
ಕರರು ಸಂಶಯವಿಲ್ಲ ಕಾರಿಯವೇನು ಹೇಳೆಂದ ೯

ಎಂದಡಾವಿಪ್ರೋತ್ತಮನು ತಾ
ಬಂದ ಕಾರ್ಯವು ಹೊರಗೆ ನೆಗಳುವು
ದೆಂದು ಮಿಗೆ ಹಾರೈಸುತೇಱಿದ್ವಾಸನವನಿಳಿದು
ವಂದಿಸುತ ತತ್ಪಾದ ಕಮಲ
ದ್ವಂದ್ವದಲಿ ನಗುತಿರಿಸಿದನು ಪೂ
ರ್ಣೇಂದುಮುಖಿ ಕಳುಹಿದ ಸುವಿಜ್ಞಾಪನದ ಪತ್ರಿಕೆಯ ೧೦

ನಗುತ ನಿಜಪದನಿಹಿತ ಲಿಖಿತವ
ನೊಗುಮಿಗೆಯ ಹರುಷದಲಿ ಕೈಯಲಿ
ತೆಗೆದು ಸುಸ್ಮಿತ ಮಧುರ ನಯನಾಪಾಂಗದಲಿ ನೋಡಿ
ಜಗದ ಪತಿ ದಂತಾವಳಿಯ ದೀ
ಪ್ತಿಗಳು ಪಸರಿಸೆ ಹರುಷದಲಿ ದೃಗು
ಯುಗಳ ವೊಸರಲು ತಾನೆ ವಾಚಿಸಿದನು ನರಾಗದಲಿ ೧೧

ಕೇಳಿ ನಿನ್ನಯ ಗುಣಗಳನು ಕಿವಿ
ಸೋಲಿದವು ಮನವದಱ ಬಳಿಯಲಿ
ಬೀಳುಕೊಂಡುದು ದೇವ ನಿನ್ನಪದಾಬ್ಜ ಸನ್ನಿಧಿಗೆ
ಹೇಳಲಱಿಯೆನು ಭುವನ ಮೋಹನ
ಮೂಲ ಮಂತ್ರ ಕುಲಾಧಿದೈವವೆ
ಪಾಲಿಸೆನ್ನಿಷ್ಟಾರ್ಥವನು ಚಿತ್ತವಿಸಿ ಬಿನ್ನಪವ ೧೨

ಹಜ್ಜೆಯಿಟ್ಟುದು ಮುಂದೆ ಮನ ನಿ
ರ್ಲಜ್ಜೆ ತನದಲಿ ಮಾಳ್ಪೆನೇನನು
ವರ್ಜಿಸಿದೆನಭಿಮಾನವನು ನಿನಗೋತು ಮನದೊಡನೆ
ಸಜ್ಜನಸ್ತುತ ಗುಣನೆ ನಿನ್ನನೆ
ಲಜ್ಜಿಸುವಸತಿಯಾರು ನಿಜಚರ
ಣಾಬ್ಜ ಸೇವಾಸಾರ ಸೌಖ್ಯವ ಸೀವುದೆನಗೊಲಿದು ೧೩

ಬಯಸಿದೆನಲಾ ಕೃಷ್ಣ ಭಕ್ತ
ಪ್ರಿಯವೆನಿಪ ನಿನ್ನಂಘ್ರಿ ಕಮಲಾ
ಶ್ರಯವನತಿ ದುರ್ಲಭವಿದೆಂಬುದನೀಕ್ಷಿಸದೆ ಮನದ
ಪ್ರಿಯವ ಸಲಿಸುವುದೆನಗನಾಥೆಗೆ
ನಯವಿದನೆ ನಿನ್ನಂತೆ ಕರುಣಾ
ಲಯರದಾರಾಶ್ರಿತಮನೋರಥ ಕಾರಿಗಳು ಧರೆಗೆ ೧೪

ನಾಳೆ ಕೊಡುವರು ತನ್ನನಾ ಶಿಶು
ಪಾಲನೆಂಬ ದುರಾತ್ಮಕಗೆ ನೀ
ನೇಳಿದಿಟವನು ಮಾಡದೆಲ್ಲಾ ಸೇನೆಗಳು ಸಹಿತ
ಶ್ರೀಲಲಾಮನೆ ಬಂದು ಮಾಗಧ
ಸಾಲುವಾದಿ ಸಮಸ್ತ ದುಷ್ಟ ನೃ
ಪಾಲ ಕುಲವನು ಸದೆದು ಮಾಳ್ಪುದು ನಿಜ ಕರಗ್ರಹವ ೧೫

ಪರಿಭವಿಸಿ ಬಂಧುಗಳಲಂತಃ
ಪುರದಲಿದ್ದ ಬಲೆಯನು ತಾದಿಟ
ಪರಿಣಯವ ಮಾಳ್ಪಂದವೆಂತೆನಬೇಡುಪಾಯವನು
ಒರೆವೆ ನಾನಾ ದಿನದ ಹೊತ್ತರೆ
ಪುರವ ಹೊಱವಂಟಂಬಿಕಾಪದ
ದರುಶನಕೆ ಬಹುದುಂಟು ನಿಜಕುಲವಿಹಿತವಿದು ತನಗೆ ೧೬

ಬಹಳ ಬಲಸಹಿತಲ್ಲಿ ಗೈತಂ
ದಹಿತರೆನಿಸುವ ಸಾಲ್ವ ಮಾಗಧ
ಕುಹಕಿ ಚೈದ್ಯ ನೃಪಾಲಬಲವನು ಸದೆದು ನಿಜಪುರಕೆ
ವಹಿಸಿ ಪಾಣಿಗ್ರಹವಮಾಳ್ಪುದು
ಸಹಚರಿಯರೊಡನಿಂದಿದೇ ಬಿ
ನ್ನಹವು ಕರುಣಿಸು ಕೃಷ್ಣ ಕರುಣಾನಿಧಿಯೆ ನೀನೆನಗೆ ೧೭

ಇಂತು ಭೀಷ್ಮಕನಂದನೆಯ ಪ
ತ್ರಾಂತಗತವೆಂದೆನಿಸಿದಾವೃ
ತ್ತಾಂತವನು ನೋಡುತ್ತ ಸಸ್ನೇಹಾರ್ದ್ರನಯನದಲಿ
ತಿಂತಿಣಿಯ ಪುಳಕದಲಿ ಲಕ್ಷ್ಮೀ
ಕಾಂತನೋಲಾಡುತ್ತ ನಿಜನಯ
ನಾಂತದಲಿ ನೋಡಿದನು ವಿಪ್ರೋತ್ತಮನನೊಲವಿನಲಿ ೧೮

ಎನ್ನನೀಕ್ಷಿಸಲೇಕೆ ಬಹಳ ಕೃ
ಪಾರ್ಣವನೆ ಚಿತ್ತವಿಸುವುದು ವರ
ವರ್ಣನಿಯ ವಿಜ್ಞಾಪನೋಚಿತ ಕಾರ್ಯ ಸಂಗತಿಯ
ಮನ್ನಿಸುವುದವಿಳಂಬಿತದಲುಪ
ಸನ್ನವೆಂದೀ ನಿಮ್ಮಡಿಗೆ ಸಂ
ಪನ್ನವಾದಡೆ ಬೇಗ ಮಾಡುವುದೆಂದನಾ ವಿಪ್ರ ೧೯

ಎನಲು ದಾರುಕನೊಡನೆ ರಥವನು
ದನುಜರಿಪುಹೂಡೆಂದು ಯಾದವ
ಜನವನೊಡನೆಚ್ಚಱಿಸಿ ಸಾತ್ಯಕಿಗಖಿಳಸೈನಿಕವ
ಅನುವರಕೆ ನೆರಹೆನುತ ಬಲರಾ
ಮನನಿರಿಸಿ ಪುರರಕ್ಷೆಗಾ ಮಱು
ದಿನವೆ ಹೊಱವಾಳೆಯುವ ಬಿಡಿಸಿದನಂದು ನಿಜಬಲವ ೨೦

ಏಱಿರಥವನು ವಿಪ್ರನೊಡನೆ ಮು
ರಾರಿ ನಡೆದನು ಕಿಱಿದು ಬಲನಹಿ
ತಾರುವಱಿಯದವೋಲು ಮಾಗಧ ಚೈದ್ಯ ನೃಪರೊಡನೆ
ದೂರವಧವನು ಕಳೆದು ಭುವನಾ
ಧಾರ ಮೂರ್ತಿ ವಿದರ್ಭದೇಶವ
ನಾರಿದನು ನಿಲಿಸಿದನು ರಥವನು ಪುರದ ಬಾಹೆಯಲಿ ೨೧

ಹೋಗುನೀನೆಲೆ ವಿಪ್ರಯೆನೆ ತಲೆ
ವಾಗಿ ನುಡಿದನು ನಂಬಿ ಕುರುಣಾ
ನಾಗರನೆ ವೈದರ್ಭಿಗೀವೃತ್ತಾಂತ ಸಂಗತಿಯ
ಈಗಳಱುಪುವೆನೆನ್ನ ಭಾಷೆಯ
ನೀಗಲಾಗದು ಸತ್ಯ ನಿಷ್ಫಲ
ವಾಗದಂತಾರೈದು ನಡೆವುದೆನಲ್ಕೆ ಹರಿನುಡಿದ ೨೨

ಮರುಳಲಾ ನೀನೆನ್ನ ಚಿತ್ತವ
ನಱಿಯೆ ಕಾಂತೆಯುಚಿಂತೆಯಲಿ ಹೋ
ದಿರುಳು ತನ್ನನು ಬೀಳುಕೊಂಡುದು ನಿದ್ರೆ ನಯನದಲಿ
ಪುರಕೆನಡೆನಡೆ ಚಿಂತೆಬೇಡಂ
ಬುರುಹಮುಖಿಗಿದನೆನ್ನುನೀನೆಂ
ದಿರದೆ ಕಳುಹಿದನಸುರರಿಪು ನಸುನಗುತ ಭೂಸುರನ ೨೩

ಅರಸಕೇಳಾ ಕುಂಡಿನಾಧೀ
ಶ್ವರನು ಭೀಷ್ಮಕಗಂದು ತನುಜೆಯ
ಪರಿಣಯಕೆ ಪರುರವಿಸಿ ಗುಡಿತೋರಣಂಗಳಲಿ ಪುರವ
ಪರಿಪರಿಯ ವಿಭವಂಗಳಲಿ ವಿ
ಸ್ತರಿಸಿ ಮಂಗಳವಸ್ತುಗಳ ನೆಱೆ
ತರಿಸಿ ವಿದಿತೋತ್ಸಾಹದಲಿ ಮಾಡಿಸಿದನುತ್ಸವವ ೨೪

ಕೇಳಿನಿಜವೈವಾಹಿಕಕೆ ಶಿಶು
ಪಾಲನೈತಂದುದನು ಪೃಥ್ವೀ
ಪಾಲರಾಗಮನವನು ತತ್ಕಾರ್ಯೈಕಸಿದ್ಧಿಯಲಿ
ಬಾಲೆ ಕಳವಳಿಸಿದಳು ಮನದಲಿ
ತೂಳುವಂತಸ್ತಾಪವಹ್ನಿ
ಜ್ವಾಲೆಯಲಿ ತನುಬೆಂದವೋಲುಮ್ಮಳಿಸಿದಳು ಮಱುಗಿ ೨೫

ಬಾರಸಾನತಬಂಧು ಕೃಷ್ಣನು
ದಾರಗುಣನಿಧಿ ಕಳುಹಿದಾತನು
ಬಾರನೇತಕೆ ವಿಪ್ರನೇನಾದನೊ ಮನೋವ್ಯಥೆಯ
ಆರಿಗೆಂಬೆನು ದೈವಹೀನೆಗ
ದಾರುಹಿತಕಾರಿಗಳು ಕಾಣೆನು
ಕಾರಣವನಾನಿದಕೆನುತ ಚಿಂತಿಸಿದಳಬುಜಾಕ್ಷಿ ೨೬

ನಿರುತವಾನಿಭಾರ್ಗೈಯಲ್ಲದ
ಡಿರದೆ ತನ್ನೊಡವುಟ್ಟಿದಣ್ಣನೆ
ಕೊರಳ ಕೊಯ್ವನೆ ಹಗೆಯೆನಿಸಿ ತಂಗಿಯ ಮನೋರಥಕೆ
ಚರಣಸೇವಕಿಯೆಂದು ಪರಮೇ
ಶ್ವರನು ನೆನೆವನೆ ನಂಬಿದೆನ್ನನು
ಕರುಣದಲಿನೋಡಿದಳೆ ಗಿರಿಜೆಯೆನುತ್ತ ಹಲುಬಿದಳು ೨೭

ಅರಳುಗಂಗಳ ಮುಚ್ಚಿ ಕೃಷ್ಣನ
ಚರಣವನು ನೆನೆವುತ್ತ ಚಿಂತಾ
ತುರೆ ಮಹಾಶೋಕಾಶ್ರುಸಾಗರದೊಳಗೆ ಮುಳುಗಿರಲು
ಸರಸಿಜಾನನೆಗೆಡದಲಂಗ
ಸ್ಫುರಣೆಯಾದುದು ಕಂಡು ಸಖಿಗದ
ನೊರೆವುತಿರಲ್ಕೈತಂದನಾದ್ವಿಜವರನು ನಸುನಗುತ ೨೮

ಅಱಿದಳಿಂಗಿತದಿಂದ ವಿಪ್ರನ
ಬರವ ದೂರದಲೀಕ್ಷಿಸುತ ಪಂ
ಕರುಹಮುಖಿ ಗಂಭೀರಗಮನದ ಮೊಗದ ಹರುಷದಲಿ
ತರಳೆತರಹರಿಸಿದಳು ಶೋಕೋ
ತ್ಕರುಷದುದ್ರೇಕವನು ಕೃಷ್ಣನ
ಚರಣವನು ಕಂಡಂತೆ ಪುಳಕಿತೆಯಾದಳಡಿಗಡಿಗೆ ೨೯

ಏನು ಮತ್ತೇನವ್ವ ಭಾಗ್ಯವು
ಹಾನಿಧಿಯಲಾ ನೀನು ಬಂದನು
ದಾನವಾಂತಕನಧಿಕಕಾರುಣ್ಯದಲಿ ನಿನಗೊಲಿದು
ಏನನೆಂಬೆನು ಕೃಷ್ಣನಂತೆ ಕೃ
ಪಾನಿಧಿಗಳಿನ್ನಾರು ಭಕ್ತಾ
ಧೀನವಿಗ್ರಹನೆಂಬ ಬಿರುದನು ಕಂಡೆ ನಾನೆಂದ ೩೦

ಜನ್ಮ ಸಫಲವಿದಾಯ್ತು ಬಿಟ್ಟೆಯ
ಧರ್ಮದಲಿ ಕಟಕವನು ಕಂಡಂ
ತಮ್ಮ ನಿಜ ಸಂದೇಶದಲಿ ಮುನಿವಂದಿತಾಂಘ್ರಿಯನು
ನಿರ್ಮಮರು ನೆರೆಕಾಣರೀ ನಸು
ಗರ್ಮಿವಾತಕಿ ಹೋಗಿ ಸಾಕ್ಷಾ
ದ್ಬ್ರಹ್ಮಮೂರುತಿ ಕೃಷ್ಣನಂಘ್ರಿಯ ಕಂಡೆನಾನೆಂದ ೩೧

ಎಂದು ವಿಪ್ರೋತ್ತಮನು ವಿಪುಳಾ
ನಂದದಲಿ ಮುಳುಗಾಡುತಿರಲರ
ವಿಂದಮುಖಿ ಕೇಳುತ್ತ ಕೃಷ್ಣಾಗಮನವಾರ್ತೆಯನು
ತಂದ ವಿಪ್ರೋತ್ತಮನ ಚರಣ
ದ್ವಂದ್ವದಲಿ ಮೈಯಿಕ್ಕಿದಳು ಮುದ
ದಿಂದ ಮೂಳ್ಪುಚಿತವನು ಕಾಣದೆ ಬೇಱಿಮುತ್ತೊಂದ ೩೨

ಅರಸಕೇಳಾ ಕೃಷ್ಣನೊಬ್ಬನೆ
ಪರಿಹರಿಸಿ ಪರಿವಾರವನು ಹೋ
ಗಿರಲು ಕುಂಡಿನಿಪುರಕೆ ನಾನಾದೇಶದರಸುಗಳು
ಧುರಕೆ ಚೈದ್ಯನ ಪಕ್ಷದಂಗೀ
ಕರಣದಲಿ ಬಹವಾರ್ತೆಯನು ಸಂ
ಕರುಷಣನು ಕೇಳುತ್ತ ನೆರಹಿದನಂದು ನಿಜಬಲವ ೩೩

ವಹಿಲದಲಿ ನಡೆತಂದನುರುವಿ
ಗ್ರಹವ ಶಂಕಿಸಿ ನೆರಹಿ ಯಾದವ
ಬಹುಳ ಬಲವನು ಕರಿತುರಗರಥಪತ್ತಿಸಂಕುಳದ
ನಿಹಿತ ಪದರಜದೊಳಗೆ ಮುಳುಗಲು
ಮಿಹಿರಮಂಡಲವಾವರಿಸಿ ದಿ
ಕ್ಕುಹರವನು ಮೋಹರಿಸಿ ಬಿಟ್ಟನು ಪುರದ ಬಾಹೆಯಲಿ ೩೪

ರಾಮಕೃಷ್ಣರ ಬರವನದನಾ
ಭೂಮಿಪತಿ ಕೇಳುತ್ತ ಹರುಷೋ
ದ್ದಾಮಮತಿ ನಡೆದಿದಿರುಗೊಂಡನು ವಿದಿತ ವಿಭವದಲಿ
ಧಾಮರೂಪರಿಗಿತ್ತು ನಿರ್ಮಳ
ಧಾಮವನು ಮನ್ನಿಸಿದನಧಿಕ
ಪ್ರೇಮದಲಿ ಮಂಗಳ ಸುಭೋಜನ ಪಾನಶಯನದಲಿ ೩೫

ಅತ್ತಲನ್ನೆಗ ಮೊಳಗಿದುವು ಪೌ
ಹೂರ್ತಿಕರ ನಿಸ್ಸಾಳ ಭೇರಿಗ
ಳೊತ್ತರಿಸಲಂಬಿಕೆಯನಾರಾಧಿಸಲು ಭೀಷ್ಮಕನ
ಪುತ್ರಿ ಹೊರವಂಟಳು ಮಹಾದ್ವಿಜ
ಮತ್ತಕಾಶಿನಿಯರಲಿ ನಿರ್ಮಳ
ಚಿತ್ತದಲಿ ನೆನೆವುತ್ತ ಕೃಷ್ಣಪದಾಬ್ಜವಿಷ್ಟರವ ೩೬

ಕಿತ್ತ ಖಡುಗದಲೈದಿದರು ಸುಭ
ಟೋತ್ತಮರು ಪರಿವಾರ ನಡೆದುದು
ವೇತ್ರ ಜರ್ಜರ ಪಾಣಿಗಳು ಕಂಚುಕಿಗಳೊಗ್ಗಿನಲಿ
ಸುತ್ತಿ ಸುಳಿದರು ಮಾಂತ್ರಿಕರು ವಿ
ಪ್ರೋತ್ತಮರು ವರಸೂತ ಮಾಗಧ
ರೊತ್ತರಿಸಲುತ್ಸಾಹಲಿ ಹೊರವಂಟಳರಮನೆಯ ೩೭

ಕಾಲು ಮೊಗವನು ತೊಳೆದು ಸತಿಯರ
ಮೇಳದಲಿ ನಡೆತಂದು ಹೊಕ್ಕಳು
ಲೋಲಲೋಚನೆ ದೇವತಾಮಂದಿರವನೊಲವಿನಲಿ
ಸೂಳಗಿವ ಕಹಳೆಗಳ ವರ ನಿ
ಸ್ಸಾಳಭೇರೀಶಂಖರವ ದಿ
ಗ್ಜಾಲವನು ಬಿಡೆಹಳಚಲಾರಾಧಿಸಿದಳಂಬಿಕೆಯ ೩೮

ಹರಸಿದರು ಕಾಂತೆಯರು ಕೃಷ್ಣಂ
ಗರಸಿಯಾಗಲೆ ತಾಯೆ ನೀನೆಂ
ದಿರದೆ ಕೊಟ್ಟರು ಶೇಷವನು ಮಾಲ್ಯಾಕ್ಷತಾಧಿಕವ
ಸರಸಿಜಾನನೆ ಬಳಿಕ ದೇವಿಯು
ಚರಣದಲಿ ಪೊಡಮಟ್ಟು ವರವಿ
ಪ್ರರಿಗೆ ಸತಿಯರಿಗೆಱಗಿ ಹೊಱವಂಟಳು ಶಿವಾಲಯವ ೩೯

ಬಳಿಕ ಮೌನವ್ರತವನುಳಿದಾ
ಲಲನೆ ಹೊಱವಂಟದಱ ಸನಿಹದ
ಬಲಿ ವಿರೋಧಿ ಶಚೀಗೃಹಂಗಳಿಗೊಲಿದು ನಡೆತಂದು
ನಳಿನಮುಖಿ ಕುಲದೇವತೆಗಳನು
ನಲಿದು ಪೂಜಿಸಿಬೇಡಿದಳು ಮನ
ದೊಲವ ನೀವುದು ನೀವೆನುತ ಸದುಭಾವಭಕುತಿಯಲಿ ೪೦

ಬೀಳುಕೊಂಡಳು ಸತಿ ಸಮಸ್ತ ಸು
ರಾಳಿಗಭಿನಮಿಸುತ್ತ ಲಕ್ಷ್ಮೀ
ಲೋಲನನು ಭಾವಿಸುತ ಮನದಲಿ ಬಳಿಕ ಸುರಪತಿಯ
ಆಲಯುವ ಹೊಱವಂಟಳಂದಾ
ಬಾಲೆ ಕೃಷ್ಣನ ಬರವ ನಿದ್ದೆಸೆ
ಗಾಲಿಸುತ 1ಸವ್ರೀಳ1ನಯನಾಪಾಂಗವೀಕ್ಷೆಯಲಿ ೪೧

ಬಂದಳೊಯ್ಯನೆ ಚರಣ ಕಮಲ
ದ್ವಂದ್ವದಲಿ ನೂಪುರಗಳುಲಿಯಲು
ಮಂದಹಾಸೇಕ್ಷಣದಲೆಡಬಲವಂಕವನು ನೋಡಿ
ಕೊಂದನೇ ವಿಧಿಯೆನುತ ಮಾನಿನಿ
ಮುಂದೆ ಹೆಜ್ಜೆಯನಿಡಲು ಶಂಕಿಸು
ತಂದು ಮೃದುತರಗತಿಯಲೆಯ್ದಿದಳಾರಥದ ಹೊರೆಗೆ ೪೨

1 ಸಂಬ್ರೀಳ1 (ಕ)

ನಿಲುಕಿಕಾಣದೆ ಕಲ್ಪಕುಜಕ
ವ್ವಳಿವಲತೆಯೋ ತತ್ವಸುಖದಲಿ
ನಿಲವನೈದಲು ನೆಜೆಯದಾತ್ಮ ಜ್ಞಾನಸಂಪದವೋ
ಕಳವಳಿಸಿದಳು ಕಮಲಮುಖಿ ತ
ಲ್ಲಣಿಸಿ ಕಾಣದೆ ಕೃಷ್ಣ ಪದಯುಗ
ನಳಿನವನು ನಸುಬೆಮರುವಂಗೋಪಾಂಗದಲಿ ತರಳೆ ೪೩

ಇರಲು ಹಾಯ್ದನು ಕೃಷ್ಣನಾಕೆಯ
ಹೊರೆಗೆ ರಥವನು ನೂಕಿಸುತ್ತಿರ
ಲುರವಣಿಪನ್ನಪ ಭಟರುಗಳ ಮೋಹರವನೊಡೆತುಳಿದು
ಸರಸಿಜಾಕ್ಷಿಯನೆತ್ತಿಕೊಂಡ
ಬ್ಬರಣೆ ಮಸಗಲು ತನ್ನ ರಥದೊಳ
ಗಿರಿಸಿದನು ಸಂಸಾರಪತಿತರ ನೆತ್ತುವಂದದಲಿ ೪೪

ಎಲವೊ ಕವಿಕವಿಯೆಂದೆನುತ ಬಲ
ಜಲಧಿ ನೂಕಿದುದೆಂಟು ದಿಕ್ಕಿನ
ಲಿಳಿಗಧೀಶ್ವರರಾಜ್ಞೆಯಲಿ ಕರಿತುರಗ ರಥನಿಕರ
ತಳಿಸಿ ಕೃಷ್ಣನ ರಥವ ಪರಿಮಂ
ಡಳಿಸಿ ನಿಮಿಷಾರ್ಧಾರ್ಧಮಾತ್ರದ
ಲೊಳಗು ಮಾಡಿದುದಸ್ಥಿರಾಂತಃಕರಣರಂದದಲಿ ೪೫

ಕವಿದೆಸುತ ಪರಬಲನ ಬಾಣಾ
ರ್ಣವಪಲದ್ದುದು ಯಾದವರ ಬಲ
ನಿವಹವದನೇನೆಂಬೆ ನೀಕ್ಷಿಸುತಾವಿದರ್ಭಸುತೆ
ಅವಯವದ ಕಂಪದಲಿ ನಿಜಪರಿ
ಭವವ ಶಂಕಿಸಿ ತನ್ನ ಮುಖಕಮ
ಲವನು ನೋಡಲು ನುಡಿದನಸುರಾರಾತಿಸತಿಯೊಡನೆ ೪೬

ಅಂಜಬೇಡಲೆಕಾಂತೆ ನಿನ್ನವ
ರಂಜಲಱಿವರೆ ಶರನಿದಾಘದ
ಮಂಜಲಾ ಮಲೆವಹಿತರಾಯರ ಮೋಹರವಿದೆನುತ
ಕಂಜನಯನೆಯನಪ್ಪಿ ನಿಜಕರ
ಕಂಜದಲಿ ಮೈದಡವಿಭವಭಯ
ಭಂಜನನು ಬೋಳೈಸಿದನು ಮಾನಿನಿಯ ನಲವಿನಲಿ ೪೭

ಕಿರಿದೆನಿಪ ರವಿಮಂಡಲವನಾ
ವರಿಸಿ ಕವಿವಮಹಾಭ್ರಮಂಡಲ
ದಿರವತಳೆದುದು ವೈರಿಬಲ ಹರಿರಥವನಾಕ್ರಮಿಸಿ
ಇರದೆಬಿಡೆ ಬೀಸಿದುದುಗಡ ಸಂ
ಕರುಷಣೋದ್ಭವ ಸಾತ್ಯಕಿ ಪ್ರಮು
ಖರಶರಾವಳಿತೀವ್ರ ಮಾರುತನೆಂಟು ದೆಸೆಗಳಿಗೆ ೪೮

ಚೆಲ್ಲಿದುದು ನೃಪಕಟಕ ಜೋಧರು
ಬಿಲ್ಲ ಬಿಸುಟೋಡಿದರು ಕೆಲರೆಡೆ
ದಲ್ಲಣದ ಹೇಡಿಗಳು ಹೊಕ್ಕರು ಹಲಧರನ ಮರೆಯ
ಕೊಲ್ಲದಿರಿ ನಿಮ್ಮವರೆನುತ ಸಿರಿ
ವಲ್ಲಭನ ಸಾಱಿದರು ಮಾಗಧ
ಸಾಲ್ವ ಮುಖ್ಯರು ಹಾಯ್ದು ರಾಶಿಶುಪಾಲನಿದ್ದೆಡೆಗೆ ೪೯

ಏಳು ನಡೆನಿಜಪುರಕೆ ನಮಗೀ
ಕಾಲವಿದು ಶುಭವಲ್ಲ ಧರೆಯಲಿ
ಬಾಲೆಯರು ನಮಗೇಸುಬೇಕೈಸುಂಟು ನಮ್ಮೊಡಲ
ಕೋಲ ಕೋಳಾಹಳವ ನೋಡೆ
ಮ್ಮೇಳಿಗೆಯ ಭುಜಬಲವನಿದು ಪಶು
ಪಾಲರಲೀಪರಿಭೂತವಾಯ್ತೆಂದರು ಮಹೀಶ್ವರರು ೫೦

ಜಯ ಪರಾಭವಗಳಿಗೆ ಲಾಭ
ವ್ಯಯಗಳಿಗೆ ಸೇರುವುದು ಲೋಕ
ತ್ರಯವಿದೀಶ್ವರ ತಂತ್ರದಲಿ ದಿಟಬಲ್ಲೆ ನಾನಿದನು
ನಯವಿದನು ಗೋಪಾಲನೆನ್ನನು
ಜಯಿಸಿದನು ಬಹು ಪಾರವಾತನ
ಜಯಿಸಿದೆನು ತಾ ಬಳಿಕಲೆಂದನು ಮಗಧ ಭೂಪಾಲ ೫೧

ಭಂಗವಡೆಯದೆ ನೋಡು ಮತ್ತೀ
ಗಂಗವಿಸಿ ಲೋಕೈಕವೀರರು
ಸಂಗರದಲತ್ಯಲ್ಪ ಬಲರೆಂದೆನಿಪ ಗೋಪರಲಿ
ಕಂಗೆಡದಿರೀ ಕಾಲವೇನ
ಮ್ಮಿಂಗಿತಕೆ ಬರೆ ಬಳಿಕ ಜಯಿಸುವೆ
ವಂಗನಾಚೋರರನು ನೀನಿದಕಂಜಬೇಡೆಂದ ೫೨

ಎಂದು ತಿಳುಹಲು ಸಕಲ ಭೂಪರ
ವೃಂದ ನಹಿತೈದಿದನು ತನ್ನಯ
ಮಂದಿರಕೆ ಮದವಳಿಗನಿತ್ತಲು ಮನದ ದುಗುಡದಲಿ
ಎಂದನಿತ್ತಲು ರುಕ್ಮಿ ತಂಗಿಯು
ತಂದಡಲ್ಲದೆ ಪುರವನಾ ಹೊಗೆ
ನೆಂದು ರಾಯರ ಮುಂದೆ ಭಾಷೆಯ ಮಾಡಿಹೊಱವಂಟ ೫೩

ದುಷ್ಟಮತಿತಾನಾರು ದನುಜ ಘ
ರಟ್ಟನಾರೆಂಬುದನು ನೋಡದೆ
ಬಿಟ್ಟನಾ ನಿಜರಥವನಾ ಗೋವಿಂದನಭಿಮುಖಕೆ
ಬಟ್ಟೆಯಲಿ ನರ್ಮದೆಯನಸುರ ಘ
ರಟ್ಟನುತ್ತರಿಸುತ್ತಲಿರಲಡ
ಗಟ್ಟಿದನು ಹೋಗದಿರು ಹೋಗದಿರೆಲವೊ ನಿಲ್ಲೆನುತ ೫೪

ಎಲವೆಲವೊ ಹೆಂಗಳ್ಳ ಹೋಗದಿ
ರಳವಿಗೊಡು ಸಂಗರಕೆ ನೀ ಭುಜ
ಬಲವ ತೋಱಾತೋಱು ಜಿತಭೂಪಾಲಮಂಡಲದ
ಬಲುಹ ಮೆಱೆಯದಿರೆನ್ನೊಡನೆ ಕೊಳು
ಗುಳಕೆ ಹಿಡಿಚಾಪವನು ಬಾಣಾ
ವಳಿಯ ಮೊನೆಯಲಿ ಮಾತನಾಡೆಂದೆನುತ ತೆಗೆದೆಚ್ಚ ೫೫

ನಿಲ್ಲು ನಿಲ್ಲೆಲೆಕೃಷ್ಣ ನೀನಹೆ
ಬಲ್ಲಿದನು ಗೋವಳರ ಬಳಗ
ಕ್ಕೆಲ್ಲ ನೀನುತ್ತಮನಲಾ ತಪ್ಪೇನು ತನ್ನೊಡನೆ
ಬಿಲ್ಲಹಿಡಿ ರಥವೇಕೆ ತನಗೀ
ಗೊಲ್ಲರೊಡನೆಯೆ ಸಮರವೆನುತರಿ
ಮಲ್ಲನಸಿ ಚರ್ಮವನು ಕೊಂಡನು ಕೃಷ್ಣನಭಿಮುಖಕೆ ೫೬

ಸಂಗರಕೆ ನಿಲಲಾಱದಿರ್ದರೆ
ತಂಗಿಯನು ಬಿಡು ನೋತೆನೆನ್ನೆನ
ಗಂಗುಲಿಯ I ಕುಡು I ಕೃಷ್ಣ ಕಾಲ್ಗಳಿಗೆಱಗಿ ಮಱೆಹೊಗಲು
ಅಂಗರಕ್ಷೆಯ ಮಾಳ್ಪೆನಲ್ಲದ
ಡಂಗಜಾರಿಯೆ ಬರಲಿ ನಿನ್ನನು
ವಿಂಗೆ ತಾನೇ ಕಾಲನೆನುತ್ತೈತಂದನುರವಣಿಸಿ ೫೭

ಭಾವನಲ್ಲಾ ನೀನು ದಿಟ ಸ
ದ್ಭಾವದಲಿ ಬರಲಾವುವೊಡವಡ
ಲಾವುದೈ ತಪ್ಪಿವಗೆ ಕಡಿವೆವು ಬೆರಳನೊಲುವರಿಗೆ
ಗಾವಿಲನೆ ಮಱೆವೊಗುವೆನನ್ಯರ
ಭಾವನೆಗೆ ಸಹಜದಲಿ ನಿನಗೇ
ಕೀವಿಡಂಬನವೆಂದೆನುತ ಮುಱಿಯೆಚ್ಚನರಿಭಟನ ೫೮

I ಕಡಿ I (ಕ)

ಎಚ್ಚಡಹಿತನ ಹರಿಗೆ ಕಡಿತಲೆ
ನುಚ್ಚುನೂಱಿನೆ ಹಾಱಿದವು ನಭ
ಕಚ್ಚರಿಯನೇನೆಂಬೆನಭ್ರದಲಮರರುಘೆಯೆನಲು
ಮೆಚ್ಚಿದೆನೆನುತೌಡುಗಳ ನೊಡೆ
ಗಚ್ಚಿ ಮುಷ್ಟಿಯ ಬಲಿದು ಹಾಯಿದ
ನಚ್ಯುತಂಗಿದಿರಾಗಿ ದಂಡಾದಂಡಿಗನುವಾಗಿ ೫೯

ಫಡ ತೊಲಗು ಹಸು ಸೊಕ್ಕಿ ಸಿಂಹವ
ಹಿಡಿಯಬಂದುದೆ ಸಾರೆಲವೊ ಕುಲ
ಗೆಡುಗ ಬಂಧುದ್ರೋಹಿ ಪಾತಕಿಯೆನುತ ಮುಂದಲೆಯ
ಹಿಡಿದು ಧರೆಗಡಗೆಡಹಿ ಕೊರಳಿಗೆ
ಖಡುಗವನು ಹರಿಮೋಹುತಿರಲಾ
ಮಡದಿ ರುಕ್ಮಿಣಿ ನಡುಗಿದಳು ಕಾಣುತ್ತ ಭೀತಿಯಲಿ ೬೦

ದೇವರಕ್ಷಿಸು ರಕ್ಷಿಸವನತ
ದೇವರಕ್ಷಿನು ಕೊಲುವೆಯೆಂತೈ
ಭಾವನನು ನಿಜಯೋಗ ಮಾಯಾಮೋಹಿತಾತ್ಮನನು
ಕೋವಿದರಿಗರಿದಱಿವಡೆಂತೈ
ಸಾವುದನು ಸಾಕಾಂಬೆನಣ್ಣನ
ಜೀವದಾನವ ನೀವುದೆಂದಳು ಕಾಂತೆ ಕಳವಳಿಸಿ ೬೧

ಎಂದು ನಿಜ ಚರಣಾರವಿಂದ
ದ್ವಂದ್ವದಲಿ ತಲೆವಾಗಿ ನಡುಗು
ತ್ತಿಂದುಮುಖಿ ಕಂಬನಿಯ ಕಡಲಲಿ ಮುಳುಗಿರಲು ಕಂಡು
ಮಂದಹಾಸದಲಬಲೆಯನು ಗೋ
ವಿಂದನಪ್ಪುತ್ತಾನನದ ಜಲ
ಬಿಂದುಗಳ ನೊರಸಿದನು ಬೋಳೈಸಿದನು ಭಾಮಿನಿಯ ೬೨

ಕೊಟ್ಟನಂಗನೆಗಭಯುವನು ಕೈ
ಮುಟ್ಟಿಕೊಲ್ಲೆನು ಕೊಲ್ಲೆನೆನುತವೆ
ದುಷ್ಟಮರ್ದನನಧಿಕ ಕೋಪಾಟೋಪದಲಿ ಜಡಿದು
ಕಟ್ಟಿದನು ಹೆಡಗುಡಿಯನೆಲವೋ
ದುಷ್ಟ ಹೋಗೆನುತವನ ಮುಡಿಯನು
ಮುಟ್ಟಿಸಿದನಸಿಧಾರೆಯಲಿ ಮುನಿವಂದಿತನು ಮುನಿದು ೬೩

ಬಂದನಾಸಮಯದಲಿ ರಾಯರ
ವೃಂದವನು ನೆಱೆಗೆಲಿದು ಯಾದವ
ವೃಂದದೊಡನಾಹಲಧರನು ಹರಿರಮೆಯರಿದ್ದೆಡೆಗೆ
ಕಂದಿದಧರದ ಕಣ್ಣಹನಿಗಳ
ಕಂದಿದಾನನ ಕಾಂತಿಗಳ ತರಿ
ಸಂದ ತಲೆನವಿರುಗಳ ರುಕ್ಮಿನೃಪಾಲನನು ಕಂಡ ೬೪

ಬಿಟ್ಟನಾತನ ಹೆಡಗುಡಿಯ ಬಲು
ಗಟ್ಟನವನಕಟಕಟ ಮಾಡಿದೆ
ಕಷ್ಟವನು ಕಡುಮೂರ್ಖತನದಲಿ ಕೃಷ್ಣ ನೀಸಿದನು
ಮೆಟ್ಟಿಕೊಯ್ವರೆ ತಲೆಯನಂಗನೆ
ಗಟ್ಟದೇ ಘನ ತಾಪವೆನುತಾ
ಮುಷ್ಟಿಕಾರಿ ಮನೋನುರಾಗದಲೆಂದನನುನಯವ ೬೫

ಉಮ್ಮಳಿಸದಿರು ಪೂರ್ವಕೃತ ದು
ಷ್ಕರ್ಮಫಲದಲಿ ದುಃಖ ಕೃತಸ
ತ್ಕರ್ಮಫಲದಲಿ ಸೌಖ್ಯವಿಂತಿದು ನಿಯತ ಜೀವರಿಗೆ
ದೌರ್ಮನಸ್ಯವಿದೇಕೆ ನೀನಿರ
ಹಮ್ಮಮತೆಯಲಿ ನೋಡು ಬಱಿದೇ
ಯೆಮ್ಮಲಾಚರಿಸದಿರಸೂಯೆಯ ನೆಂದನಾರಾಮ ೬೬

ಹಲವು ಪರಿಯಲಿ ತತ್ವವಿದ್ಯೆಯ
ನೊಲಿದು ಬೋಧಿಸಿ ರುಕ್ಮಿಣಿಯ ಮನ
ದಳಲ ಮಾಣಿಸಿ ಸಂತವಿಸಲಾ ರುಕ್ಮಿ ದುಗುಡದಲಿ
ತೊಲಗಿದನು ತನುಗುಂದಿ ಕುಂಡಿನ
ನಿಳಯವನು ಹುಗದಿರ್ದನಿತ್ತಲು
ನೆಲೆಗೊಳಿಸಿ ನಿಜಕೆ ಭೋಜಕಟಕವದೆಂಬ ಪುರವರವ ೬೭

ಇತ್ತಲಸುರಾರಾತಿ ರಾಯರ
ಮೊತ್ತವನು ಮಾನಕ್ಷತಿಗೆ ಕೈ
ವರ್ತಿಸುತ ಕಮಲಾಕ್ಷಿ ರುಕ್ಮಿಣಿಸಹಿತ ವೊಲವಿನಲಿ
ಉತ್ತರಿಸಿ ನರ್ಮದೆಯನಾಪುರು
ಷೋತ್ತಮನು ನಿಜಬಲಸಹಿತ ವಾ
ದ್ಯೋತ್ತರದ ಬಹಳೋತ್ಸವದಲೈದಿದನು ನಿಜಪುರಕೆ ೬೮

ಕೇಳಿ ಕೃಷ್ಣಾಗಮನವನು ನೃಪ
ಜಾಲ ವಿಜಯಾವಾಪ್ತಿ ಕನ್ಯಾ
ಮೌಳಿರತ್ನದ ಲಾಭವನು ವಸುದೇವ ಮೊದಲಾದ
ಪೀಳಿಗೆಯ ಯದುವೃದ್ಧರೆದ್ದರು
ಹೇಳಲೇನುತ್ಸವದ ಸಮ್ಮತ
ದೇಳಿಗೆಯಲಂದಖಿಳಪುರಜನ ಸಹಿತ ವಿಭವದಲಿ ೬೯

ಕಳಶಕನ್ನಡಿಗಳಲಿ ಬಹುಮಂ
ಗಳ ಮಹಾವಾದ್ಯದಲಿ ಬಹುವಿಧ
ಲಲನೆಯರ ಶೋಭನ ಮಹಾಸಂಗೀತ ಸೂಕ್ತಿಯಲಿ
ಉಲಿವ ಮಾಗಧ ವಂದಿಸೂತರ
ಕಳಕಳದಲಂದಖಿಳಪುರಜನ
ಜಲಧಿ ಬರಲಿದಿರಾಗಿ ಕಾಣಿಸಿಕೊಂಡನುಚಿತದಲಿ ೭೦

ಕರೆಸಿ ಕುರು ಸೃಂಜಯ ವಿದರ್ಭೇ
ಶ್ವರರನಾ ಕಾಂಭೋಜ ಕಾಶೀ
ಶ್ವರರನಾಪ್ತ ನೃಪಾಲವರ್ಗವನಖಿಳ ಬಾಂಧವರ
ಪರಮ ಹರುಷದಲಾಮುಕುಂದನ
ಪರಿಣಯಕೆ ಪರುರವವನಾವಿ
ಷ್ಕರಿಸಿದನು ವಸುದೇವನಖಿಳಾವಾತ್ಮಜನಸಹಿತ ೭೧

ವರನಲಾ ಸಾಕ್ಷಾತವಿಶ್ವಂ
ಭರನು ವಧುವೆಲಕ್ಷ್ಮಿ ದಿಬ್ಬಣಿ
ಗರು ವಿರಿಂಚಿ ಭವೇಂದ್ರ ಮುಖ್ಯಾಮರರು ಭೂವರರು
ಸಿರಿಯುನದನೇನೆಂಬೆನಲ್ಲಿಯ
ಪುರಜನದ ಪರಿಜನದ ಹರುಷದ
ಪರಮವಿಭವದ ವಿಪುಳತೆಯನದನೆಂದನಾ ಮುನಿಪ ೭೨

ವರ ವಿವಾಹ ವಿಧಾನವನು ವಿ
ಸ್ತರಿಸಿದರು ವರ ಋಷಿಗಳಂದಾ
ವರವಧುಗಳೆಂದೆನಿಪ ಹರಿರಮೆಯರಿಗೆ ಮನವೊಲಿದು
ವರ ಚತುರ್ಥಿಯ ನಾಗವಲಿ ವಿ
ಸ್ತರಣವೆಸೆಯಲು ಸಭ್ಯರನು ಸತು
ಕರಿಸಿದನು ವಸುದೇವನಧಿಕ ಮನೋನುರಾಗದಲಿ ೭೩

ದಣಿದುದಗಣಿತ ವಿಪ್ರಕುಲ ಚಾ
ರಣರು ವಂದಿವ್ರಾತ ಬಹುವಿಧ
ಮಣಿಕನಕ ಭೂಷಣ ವಸನ ಗೋ ಭೂಮಿದಾನದಲಿ
ತೃಣವೊದಲು ಚತುರಾಸ್ಯಕಡೆಯೆನ
ಲೆಣಿಸಲೇಕೋಲಾಡಿದರು ಮ
ನ್ನಣೆಯ ಮಧುರೋಕ್ತಿಯ ಮಹಾವಿಭವದಲಿ ಮೂಲೋಕ ೭೪

# ೧೦

## ಪೌಂಡ್ರಕ ಯುದ್ಧ

ಇರಲು ಬಂದನು ದೂತನೊಬ್ಬನು
ಹೊಱಗೆ ಬಾಗಿಲ ಮುಂದೆ ನಿಂದವ
ಸರದವರ ಬೆಸಗೊಂಡು ಹೊಗಿಸಲು ಹೊಕ್ಕನೋಲಗವ
ನೆರೆದ ಯದುರಾಯರ ಮಹಾಸಭೆ
ಯಿರವನೀಕ್ಷಿಸುತೊಡಲು ಕಂಪಿಸಿ
ಕರಯುಗವ ಮುಗಿದೆಱಗಿ ಬಿನ್ನಹ ಮಾಡಿ ಕೆಲಸಾರ್ದ ೧

ಆರೆಲವೊ ನೀನಾರುಕಳುಹಿದ
ರಾರಭೃತ್ಯನು ಹೇಳೆನಲು ದೈ
ತ್ಯಾರಿ ಬಿನ್ನಹ ಚಿತ್ತವಿಸು ಕಾಶೀಶನೆಂದೆನಿಪ
ಭೂರಿಭುಜಬಲ ಪೌಂಡ್ರಕಾಖ್ಯನು
ಹೀರಮಣನಟ್ಟಿದನು ದೇವರ
ಚಾರುಚರಣಾಂಬುಜದ ಸನ್ನಿಧಿಗೆಂದನಾದೂತ ೨

ವಾಸುದೇವನು ಗಂಡ ತಾನೇ
ದೇಶದಲಿ ವಿಖ್ಯಾತನೆನಲಿದು
ವಾಸುದೇವನೆನಿಪ್ಪ ಹೆಸರಿದು ನಿನಗಿದೆತ್ತಣದು
ಪಾಶುಪಾಲ್ಯವಲಾ ನಿನಗೆ ರಾ
ಜಾಸನಕೆ ನೀನಾರು ಬಱಿಯಭಿ
ಲಾಷೆಯಲ್ಲದೆ ಕಾರ್ಯಸಿದ್ಧಿಗಳಿಲ್ಲ ನಿನಗೆಂದ ೩

ಅಱಿಯದವರಜ್ಞಾನಿಗಳು ನೀ
ನುಱುವ ದೈವವು ವಿಷ್ಣುಧರೆಗವ
ತರಿಸಿದನೆನುತೊಲಿದು ಕೊಂಡಾಡಿದರೆ ಬೆಱೆತೆಯಲಾ
ನೆಱೆವಿಚಾರಿಸಿ ನೋಡಲೀಜಗ
ಕುಱುವ ದೈವವೆ ತಾನು ಜಗವಿದ
ನಱಿಯದಾಡುವುದದಕೆ ನೀಮುಯ್ಯಾನಬೇಡೆಂದ ೪

ಅವತರಿಸಿದೆನು ತಾನು ಭೂಭಾ
ರವನು ಕಳೆಯಲು ಬೇಡಿಕೊಂಡರು
ದಿವಿಜರೆನ್ನನು ಸಕಲ ಭೂತಂಗಳಲಿ ನೆಱೆಕೃಪೆಯ
ಸವನಿಸಲು ನೀನಾರು ಬಿಡು ನಾ
ಮವನು ಮೂಢಾರೋಪಿತವನಾ
ಹವವ ಕೊಡು ಬಿಡಲಾಱದಿರ್ದ್ದರೆ ಮಱೆವೊಗುವುದೆಂದ ೫

ಎನ್ನ ಚಿಹ್ನವೆನಿಪ್ಪ ಚಕ್ರವ
ನೆನ್ನದೆನಿಸುವ ಗದೆಯ ಶಾರ್ಙ್ಗವ
ನೆನ್ನವನು ನೀನೇಕೆ ಧರಿಸುವೆ ಪಾಂಚಜನ್ಯವನು
ಎನ್ನನುಜ್ಞೆಯಲಲ್ಲಿಪವನಿಯು
ಲನ್ಯರೇತಕ್ಕರುಹರೇತಕೆ
ಪನ್ನಗಾರಿಧ್ವಜಗಿಜಂಗಳ ವಿಭವ ನಿನಗೆಂದ ೬

ಕಕ್ಕುಲಿತೆ ಬೇಡೆಲ್ಲವನು ಬಿಡು
ಮಕ್ಕಳಾಟಿಕೆಯೇಕೆ ಮೇಣ್ಮಱೆ
ವೊಕ್ಕೆಯೆಂದೆನ್ನೆನ್ನ ದಿವ್ಯಪದಾಬ್ಜವಿಷ್ಟರವ
ನೊಕ್ಕಿ ನೀನೆನ್ನೊಡನೆ ಸಮರಕೆ
ಹೊಕ್ಕೆಯಾದರೆ ಬದುಕುವುದುಹುಸಿ
ವೊಕ್ಕತುಪ್ಪದ ಗಾದೆಯಹುದೆಂದಂದನಾ ಭೂಪ ೭

ಎಂದರಾದೂತನ ನುಡಿಗೆ ಘೊ
ಳ್ಳೆಂದುದಾಸಭೆ ಸೂಸಿದುವು ಬಾ
ಯಿಂದ ತಂಬುಲಗಳು ಮಹಾಯದುವೀರ ಮುಖ್ಯರಿಗೆ
ಮಂದಹಾಸದಲಸುರರಿಪು ನಗು
ತೆಂದನಾತನ ನುಡಿಗೆ ಹೇಳಿಲೆ
ತಂದೆ ಹೇಳಿನ್ನೊಮ್ಮೆ ಹೇಳಿನ್ನೊಮ್ಮೆ ಹೇಳೆನುತ ೮

ಬಹೆನು ನಡೆನಡೆ ನಿನ್ನೊಡೆಯ ನಿನ
ಗೆಹಗೆ ಪೇಳಿದನಾವರಿಯ ತಾ
ನಹೆನು ಸಂಶಯವಿಲ್ಲ ಬಲ್ಲವರಿಲ್ಲ ತನ್ನೊಂದು
ಸಹಜವನು ನೀ ಹೋಗೆನುತ ಘನ
ಮಹಿಮನಾತನ ಕಳುಹಿ ರಥಸ
ನ್ನಿಹಿತವಾಗಲೆನುತ್ತ ದಾರುಕನೊಡನೆ ನೇಮಿಸಿದ ೯

ಬಂದುದಾಕ್ಷಣದಲಿ ಮಹಾರಥ
ವೊಂದೆಸೆಗೆ ಗಜಘಟೆಗಳೊಡ್ಡಿದ
ವಂದವಡೆದಶ್ವಾವಳಿಗಳೊಡನೊಡನೆ ರಥನಿಕರ
ಸಂದಣಿಸಲಡರಿದನು ರಥವನು
ದುಂದುಭಿಯ ಕಹಳೆಗಳ ಮಾಗಧ
ವಂದಿಗಳ ಕಳಕಳದಲಸುರಾರಾತಿ ವಹಿಲದಲಿ ೧೦

ಭೂರಿಭುಜಬಲಶೌರ್ಯಯುತರ
ಕ್ರೂರ ಸಾತ್ಯಕಿ ಪೃಥುವಿಪೃಥು ಗದ
ಸಾರಣೋದ್ಧವಮುಖ್ಯ ವರಯಾದವ ಮಹಾಭಟರು
ಮೇರೆದಪ್ಪಲು ಬಹಳ ಸೇನಾ
ಭಾರದಲಿ ಕಲ್ಪಾಂತ ಪಾರಾ
ವಾರವೆನೆ ನೆಡೆತಂದು ಬಿಟ್ಟುದು ವಾರಣಾಸಿಯಲಿ ೧೧

ಪುರದ ಹೊರಬಾಹೆಯಲಿ ಶಂಖವ
ನಿರದೆ ಮೊಳಗಿಸಿ ಪೌಂಡ್ರಕನ ಕರಿ
ಕರೆ ಮಹಾವಿಷ್ಣುವನು ಕಾಂಬೆನೆನುತ್ತ ದೂತರನು
ಭರದಲಟ್ಟಿದರವರು ನೃಪನನು
ಕರೆದರೇಳೇಳಾಹವಕೆ ನಿಂ
ದಿರು ಮನದ ಧೃತಿಯುಳ್ಳೊಡೆಂದರು ಚಾರರು ಕೈನೆಗಹಿ ೧೨

ಹೊಡೆವ ಭೇರಿಯ ನಿಸ್ಸಳದ ಗಡ
ಬಡೆಯ ಕೈವಾರಿಗಳ ಬಿಡದು
ಗ್ಗಡಿಪ ಬಿರುದಿನ ಕಹಳೆಗಳ ಸುಭಟರ ಮಹಾರವದ
ಖಡುಗ ಶರ ಶೂಲಾದಿ ಶಸ್ತ್ರದ
ಗಡಣ ಗಗನವನಳ್ಳಿಱಿಯಲಾ
ಪೊಡವಿಪತಿ ಕಡುಬಿಂಕದಲಿ ನಡೆತಂದನಾಹವಕೆ ೧೩

ಕೃತ್ರಿಮವೆನಿಪ್ಪೊಂದು ಗರುಡನ
ಪುತ್ಥಳಿಯನಿರದೇಱಿ ಕೈಗಳ
ನೆತ್ತಿ ಕೆಲದವಱಿಂಗೆ ಕೈವಾರಿಸುವುದೆಂದೆನುತ
ಮತ್ತೆ ತನ್ನನು ತಾನೆ ನೋಡಿ ನ
ಗುತ್ತ ಬಹಭೂಪಾಧಮನ ಕಾ
ಣುತ್ತ ಗಹಗಹಿಸಿದನು ದನುಜಾರಾತಿ ಕೈವೊಯ್ದು ೧೪

ಸಿಡಿಲುಗಳು ಸಹಿತಭ್ರಚಯುವವ
ಗಡಿಸಿ ರವಿತಾರಾಗ್ರಹಾವಳಿ
ಯಡಸಿಕವಿವಂದದಲಿ ಪೌಂಡ್ರಕರಾಜ ಭಟನಿಕರ
ಖಡುಗ ಪಟ್ಟಿಸ ಪರಿಘ ಶೂಲದ
ಗಡಣದಲಿ ಮುಸುಕಿದರು ಬಾಣದ
ಕಡಲ ಕವಿಸಿದರೊಂದು ನಿಮಿಷಾರ್ಧಾರ್ಧ ಮಾತ್ರದಲಿ ೧೫

ನಟ್ಟುವಿಗನೋ ನೃಪನೊ ಮಝುಯೆನು
ತಟ್ಟಹಾಸವ ಮಾಡೆ ಕೈಪಱಿ
ಗುಟ್ಟಿ ನಗುವ ಯದುಪ್ರವೀರರ ಬಹಳ ನಿರ್ಘೋಷ
ಘಟ್ಟಿಸಿತು ಭುವನವನು ಕಾಣುತ
ದುಷ್ಟಮನದ ನೃಪಾಲನೆಡಬಲ
ಕಿಟ್ಟಳಿಸಿ ಕವಿಸಿದನು ಕೈಸನ್ನೆಯಲಿ ನಿಜಬಲವ ೧೬

ಆಟಗಾಱನಪಡೆಯಲಾ ನಿ
ಮ್ಮಾಟವಿದು ಲೇಸಾಯ್ತು ಕಾಲನ
ನೋಟವಿದು ನಿಮಗೆನುತ ತೆಗೆದು ಮಹಾಸ್ತ್ರಸಂಚಯವ
ನಾಟಿಸಿದನವರವರ ಕಾಯದ
ಕೋಟರದ ಕುಱುವದಲಿ ಕಾಲನ
ಚೀಟುಗಳು ಕವಿವಂತೆ ಕವಿದುವು ಹರಿಶರವ್ರಾತ ೧೭

ತೊಲಗಿರೈ ಬಣಗುಗಳು ನೀವೆಲ
ವೆಲವೊ ತೋಱಿರೆ ನಿಮ್ಮ ವಿಷ್ಣುವ
ನೊಲಿದು ಕಾಣಿಸಿಕೊಂಬುದೆಮ್ಮನು ಬಾಣ ಪೂಜೆಯೆನು
ಸಲಿಸುವೆವು ನಾವೆನುತ ತನ್ನೃಪ
ಬಲವನದನೊಡೆತುಳಿದು ಹಾಯ್ದನು
ಕೊಳುಗುಳದಲಾಪೌಂಡ್ರಕಾಖ್ಯನೃಪಾಲಸಿದ್ದೆಡೆಗೆ ೧೮

ಎಲವೊ ಬಱಿದೇ ದೂತಮುಖದಲಿ
ಗಳಹಿದೆಯಲಾ ಸಮರಮುಖದಲಿ
ತೊಲಗಿನಿಲ್ಲದೆ ಕೊಂಬುದೆನ್ನ ಮಹಾಸ್ತ್ರಸಂತತಿಯ
ಛಲವ ಬಿಟ್ಟರೆ ಮಱಿಯೊಗುವೆ ನೀ
ಗಳಿಯದಲ್ಲದಡವನಿತಳದಲಿ
ಮಲಗಿಸುವೆನಸ್ತ್ರೌಘಶಯನದಲೆಂದನಸುರಾರಿ ೧೯

ಎನುತ ತೆಗೆದಾ ಪೌಂಡ್ರಕನತನು
ನನೆಯುಲೆಚ್ಚನು ಬಾಣನಿಕರದ
ಲನಿತುವನು ಕಡಿದೆಚ್ಚನಾ ನೃಪನಸುರವೈರಿಯನು
ದನುಜರಿಪು ಬಳಿಕವನ ರಥವನು
ಧನುವನಶ್ವಾವಳಿ ಮಣಿಧ್ವಜ
ಕನಕ ಚಮರಚ್ಛತ್ರ ನಿಕರಂಗಳನು ಖಂಡಿಸಿದ ೨೦

ಉಡಿದ ರಥವನು ಬಿಸುಟು ಖಡುಗವ
ತುಡುಕಿ ಫಡಫಡ ನಿಲ್ಲೆನುತ ನೃಪ
ನಡಸಿದಾಟೋಪದಲಿ ಬರುತಿರಲವನ ಮಸ್ತಕವ
ಕಡುಗಿ ಚಕ್ರದಲಿಡಲು ತಲೆಯನು
ಕಡಿದು ಹಾಱಿದುದಂಬರಕೆ ಸುರ
ರೊಡನೆ ಜಯಜಯ ಕೃಷ್ಣ ಜಯಯೆನುತಿರ್ದರಭ್ರದಲಿ ೨೧

ಇಂತು ಪೌಂಡ್ರಕ ಕಾಶಿರಾಜನ
ನಂತಕನಪುರಕಟ್ಟಿ ದನುಜಕು
ಲಾಂತಕನು ಮರಳಿದನು ಜಯರವ ಪುಷ್ಪವೃಷ್ಟಿಯಲಿ
ಅಂತರಿಕ್ಷದಲಮರಚಯವೋ
ರಂತೆ ಹೊಗಳುತ್ತಿರಲು ಲಕ್ಷ್ಮೀ
ಕಾಂತನಂದೆಯಿತಂದು ಹೊಕ್ಕನು ದ್ವಾರಕಾಪುರವ ೨೨

## ೧೧

# ಸ ತ್ಯ ಭಾ ಮೆ

ಅರಸಕೇಳಾದ್ವಾರಕಾಪುರ
ವರದಲಾ ಸತ್ರಾಜಿತಾಖ್ಯನು
ತರಣಿಯನು ಭಜಿಸಿದನು ತತ್ಪದಭಾವಭಕುತಿಯಲಿ
ಕರುಣಿಸಿದನಾತಂಗೆ ರತ್ನವ
ನಿರದೆ ನಿಜಭಕ್ತಂಗೆ ಬಳಿಕಾ
ಪರಮ ಗುಣನಿಧಿ ಬಂದನಂದಾ ದ್ವಾರಕಾಪುರಕೆ ೧

ತರಣಿ ತನಗಿತ್ತಮಳ ರತ್ನವ
ನಿರದೆ ಕೊರಳಲಿ ಧರಿಸಿ ಕೊಂಡಂ
ಬುರುಹ ಮಿತ್ರನಭಕ್ತನಾಸತ್ರಾಜಿತನು ಪುರಕೆ
ಬರುತಿರಲು ಪುರವಾಸಿಜನ ಕಂ
ಡಿರದೆ ನೋಡುವೆವೆನುತ ಪರಿತಂ
ದಿರದೆ ಬಿನ್ನಹಮಾಡಿದರು ಕೃಷ್ಣಂಗೆ ಕೈಮುಗಿದು ೨

ದೇವದೇವನ ಚರಣಕಮಲ ಯು
ಗಾವಲೋಕನಕಿಂದಿದೇ ರಾ
ಜೀವಸಖನೀಬಂದನೀಕ್ಷಿಸುವವರ ದೃಷ್ಟಿಗಳು
ಸೀವುತಿವೆ ರಕ್ಷಿಸುವುದಧಿಕ ಕೃ
ಪಾವಲೋಕನದಿಂದೆನಲು ರಾ
ಜೀವನಾಭನು ನೋಡಿನಗುತಿಂತೆಂದನವರೊಡನೆ ೩

ಕಂಜಸಖನಲ್ಲಲ್ಲ ಬಾಲಕ
ರಂಜದಿರಿ ಬೆದಱದಿರಿ ಬಱಿದೇ
ಗುಂಜಿಮಾಣಿಕವೆಂಬ ಮರುಳುಗಳಂತೆ ಮತಿಗೆಟ್ಟು
ಅಂಜದಿರಿ ಸತ್ರಾಜಿತನು ವರ
ಕಂಜಸಖನಿತ್ತವುಳ ರತ್ನ ಸು
ರಂಜಿತನು ಬರುತ್ತೈದನೆಂದನು ನಗುತ ಮುರವೈರಿ ೪

ಎನುತಿರಲು ಮಧುವೈರಿ ತನ್ನಯ
ಮನೆಯ ಹೊಕ್ಕನು ಮಣಿಧ[1]ರ[1]ನು ಸಂ
[2]ಜನಿಸಿದ[2]ನು ಧನವಂತನಾದನು ಪೂಜಿಸುತ್ತಿರಲು
ದಿನದಿನದಲೆಂಟೆಂಟು ಭಾರದ
ಕನಕವನುಮಣಿಕೊಡುವುದದಱೊಳು
ಜನಿಸದಾಧಿವ್ಯಾಧಿ ದುರ್ಭಿಕ್ಷಾದಿ ಭಯವೆಂದ ೫

ಒಂದುದಿನ ತದ್ರತ್ನವನು ಗೋ
ವಿಂದನಾಸತ್ರಾಜಿತನ ಕರೆ
ದೆಂದನೀವುದು ಯದುನೃಪಾಲಂಗೆಂದಡೆಯು ಕೊಡದೆ
ಮಂದಮತಿ ಧನಲೋಭದಲಿ ನಿಜ
ಮಂದಿರದಲೇ ಪೂಜಿಸುತ್ತ ಮು
ಕುಂದನಾಜ್ಞೆಯ ಮೀಱಿ ಲೆಕ್ಕಿಸದಿರ್ದನುಬ್ಬಿನಲಿ ೬

ಇರಲು ಸತ್ರಾಜಿತನ ತಮ್ಮನು
ಧರಿಸಿ ಮಣಿಯನು ಹೋದನಡವಿಗೆ
ತುರಗದಲಿ ಮೃಗಯಾವಿಹಾರವಿನೋದದಿಂದಿರಲು
ಕೆರಳಿಕೊಂದುದು ಸಿಂಹವಾಕೇ
ಸರಿಯ ಕೊಂದನು ಜಾಂಬುವನು ಬಳಿ
ಕರಸ ಕೇಳಾ ಮಣಿಸಹಿತ ಹೊಕ್ಕನು ಮಹಾಬಿಲವ ೭

---
1ವ1 (ಖ) 2ಜನಿತವ2 (ಖ)

ಅತ್ತಲಜಿಸಿದರಾಪ್ರಸೇನನ
ತೆತ್ತಿಗರು ಸತ್ರಾಜಿತಾದ್ಯರು
ಸತ್ತ ತಮ್ಮನ ಕಂಡು ಕೃಷ್ಣನ ಮೇಲೆ ಶಂಕಿಸಲು
ಅತ್ತಲಾವಾರ್ತೆಯನು ನಿರ್ಮಳ
ಮೂರ್ತಿ ಕೇಳಿದು ತನ್ನಮೇಲಣ
ಹೊತ್ತವಿಲಗವ ಕಳೆಯಲಸುರಾಂತಕನು ಮೊಜವಂಟ ೮

ಅಜಿಸಿ ಮುರಹರನಾಪ್ರಸೇನನ
ಮರಣ ಸಿಂಹದಲಾದುದನು ಕಂ
ಡಿರದೆ ಬೆಂಬತ್ತಿದನು ಸಿಂಹದ ಹಜ್ಜೆಯನು ಬಿಡದೆ
ಉರವಣಿಸಿ ಸಿಂಹವದು ಪಿಸಿನಾಂ
ತರದಲಡಗೆಡೆದಿರಲು ಕಂಡನು
ಕರಡಿಯುಗುರಿನ ಗಾಯದಲಿ ಜೆಜಗಾದನಸುರಾರಿ ೯

ಸಿಂಹವನು ಕೊಲುವಂಥ ಕರಡಿಯ
ಸಿಂಹವಿಕ್ರಮವೆಂತೆನುತ ನರ
ಸಿಂಹನೈದಿದನಗಲ ಹಜ್ಜಗೆ ಹಜ್ಜೆಯನುಸಲಿಸಿ
ಗಂಹರವನವವಾದ ಶಿಖಿದಂ
ದಹ್ಯಮಾನಾಂತರನು ಹೊಕ್ಕನ
ಸಹ್ಯತಾಪತ್ರಯ ವಿದೂರನು ಋಕ್ಷಪನ ಬಿಲವ ೧೦

ನಿಲಿಸಿ ನಿಜಪರಿವಾರವನು ಬಾ
ಗಿಲಲಿ ದಿನಹನ್ನೆರಡನೀಕ್ಷಿಸಿ
ತೊಲಗುವುದು ನೀವೆನುತ ತದ್ಭೃಕ್ಷಾಧಿಪನ ಬಿಲವ
ಜಲಜನಾಭನು ಹೊಕ್ಕು ಬಲುಗ
ತ್ತಲೆಯ ಮಾರ್ಗವ ಕಳೆದು ಕಂಡನು
ಲಲಿತರತ್ನವನರ್ಭಕನು ಕೊಂಡಾಡುತಿರಲಲ್ಲಿ ೧೧

ನಿಂದನವನ ಸಮೀಪದಲಿ ಗೋ
ವಿಂದನಾ ರತ್ನಾಭಿಲಾಷೆಗೆ
ಸಂದು ಸುಳಿವುತ್ತಿರಲು ಕಂಡಾಧಾತ್ರಿ ಮುರಹರನ
ಬಂದನಾರಿವನೆನುತ ಮೊಱೆಯಿಡ
ಲಂದದನು ನೆಱೆಕೇಳುತವೆ ಹರಿ
ತಂದನಾಋಕ್ಷಾಧಿಪತಿ ಜಾಂಬವನು ಕಡುಮುನಿದು ೧೨

ಅಱಿಯದಾತ್ಮಸ್ವಾಮಿಯೆಂಬುದ
ನೆಱೆವಿಚಾರವಿಹೀನನಾಗಿಯೆ
ತಱುಬಿ ಕಾದಿದನಾಯುಧಂಗಳಲಸ್ತ್ರಶಸ್ತ್ರದಲಿ
ಮುಱಿದು ತರುನಿಕರಂಗಳಲಿ ಹಾ
ನಱೆಗಳಲಿ ತೋಳ್ಗಳಲಿ ಬಿಡದ
ಬ್ಬಱಿಸಿ ಕಾದಿದರೊಬ್ಬರೊಬ್ಬರ ಜಱೆದು ಮೂದಲಿಸಿ ೧೩

ಮುಷ್ಟಿಯುದ್ಧವ ಮಾಡುತಿರಲಂ
ದಷ್ಟವಿಂಶತಿದಿವಸ ಪರಿಯಂ
ತಿಷ್ಟಭಕ್ತನ ಕೂಡೆ ಲೀಲೆಯಲಾಡುವಂದದಲಿ
ನಷ್ಟವಾದುದು ಸತ್ವವಾತನ
ರಿಷ್ಟವೈರಿಯ ಕರಹತಿಗೆ ನಿ
ಷ್ಪಿಷ್ಟ ಗಾತ್ರನು ಜಾಂಬವಂತನು ಬಳಲುತಿಂತೆಂದ ೧೪

ಆರು ನೀನಲೆವೀರ ಜೀವರ
ಭೂರಿಸತ್ವಾತ್ಮಕನೊ ಕೌಸ್ತುಭ
ಧಾರಿಯೋ ಶಂಕರನೊ ಮೇಣ್ಸರಸೀರುಹೋದ್ಭವನೊ
ಆರು ತನ್ನೊಡನಕಟ ಕಾದುವ
ವೀರರೀಯುಗದೊಳಗೆ ವಿಸ್ಮಯ
ಕಾರಿಯಾದೆಯಲಾಯೆನುತ ನೋಡಿದನು ಮನದೊಳಗೆ ೧೫

ಮತ್ತೆ ಹರಿ ಕರುಣಿಸಲು ಕಂಡನು
ಚಿತ್ತದಲಿ ರಘುನಾಥನೆಂಬುದ
ನತ್ಯಧಿಕ ಭಕುತಿಯಲಿ ಮೈಯಿಕ್ಕಿದನು ಚರಣದಲಿ
ಸತ್ಯಸಂಧನೆ ತನಗೆ ಮಱವೆಯ
ನಿತ್ತನಿತುದಿನ ಕಾದಿದೆಯೆನು
ತ್ತತ್ತನಾಜಾಂಬುವನು ಕೃಷ್ಣನ ಕಾಲ್ಗಳನು ಹಿಡಿದು ೧೬

ಏಳೆನುತ ನೆಗಹಿದನು ಪರಮ ಕೃ
ಪಾಳು ತಕ್ಕೈಸಿದನು ಭಕುತನ
ಮೌಳಿಯನು ತನ್ನೆರಡು ಕರತಳದಿಂದ ಮೈದಡವಿ
ಹೇಳಿದನು ಕಾರ್ಯವನು ತನ್ನಯ
ಮೇಲೆ ಮಣಿಕೃತದೋಷವನು ಜನ
ಜಾಲವಾವಿರ್ಭವಿಸಿದುದನಾ ಜಾಂಬವಂತಂಗೆ ೧೭

ಇತ್ತನಾತನು ಬಳಿಕ ತನ್ನಯ
ಪುತ್ರಿಯನು ಜಾಂಬವತಿಯೆಂಬಳ
ನತ್ಯಧಿಕ ಗುಣರೂಪ ಸಂಪನ್ನೆಯನು ಮಣಿಸಹಿತ
ಮತ್ತೆ ಬಹುವಿಧ ವಸ್ತುಗಳನೊಲಿ
ದಿತ್ತು ಪೂಜಿಸಿದನು ಪರಾಪರ
ವಸ್ತುವನು ವೇದಾಂತ ವಿಶ್ರುತ ಕೀರ್ತಿಯನು ನಲಿದು ೧೮

ಇತ್ತಲೀಪರಿ ಹಲವುದಿನ ಸಂ
ವೃತ್ತವಾಗಲು ಬಳಿಕ ಬಿಲಮುಖ
ದತ್ತ ಬಂದುದು ಸಕಲ ಬಾಂಧವ ಭೃತ್ಯಪರಿಜನಕೆ
ಚಿತ್ತದಂತಸ್ತಾಪ ಭಯ ಶೋ
ಕೋತ್ತರದ ದುರ್ಮಾನದಲಿ ಪುರ
ದತ್ತಲೈದಿದರಿತ್ತ ದಿನದವಧಿಯನು ನೆಱೆನೋಡಿ ೧೯

ಕೇಳಿ ವಸುದೇವಾದಿ ಬಾಂಧವ
ಜಾಲವಾ ದೇವಕಿ ಸಹಿತ ವರ
ಬಾಲೆಯರು ಬಸವಳಿದು ಕೃಷ್ಣವಿನಾಶ ದುಃಖದಲಿ
ಜ್ವಾಲೆಯೊಳು ನಿಂದಂತೆ ಶೋಕ
ವ್ಯಾಳವಿಷಮೂರ್ಛಿತರು ಹೊಕ್ಕರು
ಶೈಲನಂದನೆಯಂಘ್ರಿಕಮಲದ ಮಱಿಯನಖಿಳಜನ ೨೦

ತಾಯೆ ಕರುಣಿಸು ತನಗೊಲಿದು ನಾ
ರಾಯಣನ ಜೀವವನು ರಕ್ಷಿಸು
ಮಾಯೆ ಭುವನಾಧಾರೆ ಶೋಕಭಯಾಭಿತಪ್ತರನು
ಕಾಯಬಲ್ಲವರಾರು ನಿನ್ನಂ
ತೀಯಶೇಷಸುರಾವಳಿಯೊಳೆಂ
ದಾಯುವತಿಜನ ವೃದ್ಧಜನ ಮಱಿವೊಕ್ಕುದಂಬಿಕೆಯ ೨೧

ಅಂಬಿಕೆಯ ನಿಂತಖಿಳಪೌರ ಕ
ದಂಬವಾರಾಧಿಸಲು ತತ್ಫಲ
ವಿಂಬಿನಲಿ ತೋರ್ಪಂತೆ ಬಿಲವಾಸವನು ಹೊಱವಂಟು
ನಂಬಬಲ್ಲಡೆ ದೈವವನು ಜಯ
ವೆಂಬವೋಲಸುರಾರಿ ಬಂದನು
ಜಾಂಬವತಿಸಹಿತಾಕುಶಸ್ಥಲಿಗಧಿಕಹರುಷದಲಿ ೨೨

ರತ್ನವರವನು ಕೊಂಡು ಕನ್ಯಾ
ರತ್ನ ಸಹಿತಾನಂದದಲಿ ಗುಣ
ರತ್ನಮೂರುತಿ ಪುರಕೆ ಬಿಜಯಂಗೈಯುತಿರೆ ಕಂಡು
ಯತ್ನದಲಿ ಪುರವಾಸಿಜನ ನವ
ರತ್ನಮಣಿ ತೋರಣಗಳೆಸೆಯಲು
ನೂತ್ನವೆನೆ ನಡೆದಿದಿರುಗೊಂಡರು ವಿದಿತ ವಿಭವದಲಿ ೨೩

ಹೋದ ಜೀವವ ಪಡೆದೆವೆನುತ
ತ್ಯಾದರದಲಂದಖಿಳಜನ ಹರು
ಷೋದಧಿಯಲೋಲಾಡುತಿದ್ದುದು ಸಕಲ ಬಂಧುಜನ
ಮೇದಿನೀಪತಿ ಕೇಳು ವಸುದೇ
ವಾದಿಗಳು ತಂತಮಗೆ ಹರಿತಂ
ದಾದಿಮೂರ್ತಿಯನಪ್ಪಿ ಮಱೆದರು ಲೋಕವಿಭ್ರಮವ ೨೪

ಕರೆದು ಸತ್ರಾಜಿತನನಾಮುರ
ಹರನು ಸಭೆಯಲಿ ನೆರೆದ ವೃಷ್ಣೀ
ಶ್ವರರ ಬಾಂಧವನಿಕರದೊಡ್ಡೋಲಗದ ಮಧ್ಯದಲಿ
ಹರುಷಮಿಗಲಂದಾ ಸ್ಯಮಂತಕ
ವರ ಮಹಾರತ್ನವನು ಕೊಟ್ಟನು
ಪರಮ ಧಾರ್ಮಿಕನೆನುತ ಕರುಣಾವನಧಿ ಕೈನೆಗಹಿ ೨೫

ಬಱಿದೆ ಹೇಳಿದೆನಕಟ ಲೋಕ
ಕ್ಕುಱುವ ದೈವದ ಮೇಲೆ ದೋಷವ
ನಱಿಯದಜ್ಞಾನಿಗಳದಾರೆನ್ನಂತೆ ಭುವನದಲಿ
ಕೊಱತೆ ಹೊತ್ತುದು ತನ್ನಮೇಲೆನು
ತೆಱಗಿ ಲಜ್ಜಾಭಾರದಲಿ ಕೈ
ಮಱೆಯ ಮೊಗದಲಿ ಕೊಂಡನಾ ಸತ್ರಾಜಿತನು ಮಣಿಯ ೨೬

ಕಂಡು ಕಸರಿಕೆ ಹೋಗಬೇಕು ಮು
ಕುಂದನಲಿ ತನಗೆಂದು ತನ್ನಯ
ನಂದನೆಯನಾ ಸತ್ಯಭಾಮಾದೇವಿಯೆಂಬಳನು
ತಂದು ಕೊಟ್ಟನು ರತ್ನಸಹಿತಾ
ನಂದಮೂರುತಿ ಗೊಲಿದು ಕೊಡಲಿಂ
ತೆಂದನಸುರಾರಾತಿ ಕನ್ಯಾರತ್ನವನು ಕೊಂಡು ೨೭

ಇರಲಿ ಮಣಿ ನಿನ್ನಲ್ಲಿ ದಿವಸೇ
ಶ್ವರನ ಭಕ್ತನಲೆನುತ ಕೊಟ್ಟನು
ವರಮಣಿಯನಾತಂಗೆ ಫಲಭೋಗಿಗಳು ನಾವೆನುತ
ಮರಳಿದನು ಬಳಿಕವನು ನಿಜ ಮಂ
ದಿರಕ ಬಂದುದು ವಾರ್ತೆ ಕೃಷ್ಣನ
ಹೊರೆಗೆ ಕೌರವಭವನದಾಹವಿಪನ್ನ ಪಾಂಡವರ ೨೮

ಒಂದುದಿನ ಮುರವೈರಿ ಕುಂತೀ
ನಂದನರ ನೀಕ್ಷಿಸಲು ಸಾತ್ಯಕಿ
ಗಾಂದಿನೀತನಯೋದ್ಧವಾದಿ ಯದೂತ್ತಮರ ಸಹಿತ
ಸ್ಯಂದನದಲೈದಿದನು ಪರಮಾ
ನಂದ ಮೂರುತಿ ಪರಮ ವಿಭವದ
ಲಂದು ಶಕ್ರಪ್ರಸ್ಥವನು ಸುರರಂಬರದಲುಲಿಯೆ ೨೯

ಹರಿದು ದೂತರು ಮುಂಚೆ ಕೌಂತೇ
ಯರಿಗೆ ಕೃಷ್ಣಾಗಮನ ವಾರ್ತಾ
ಪರಮ ಸಂತೋಷವನು ಬಿನ್ನಹ ಮಾಡಲುರವಣಿಸಿ
ನೆರೆದ ಸಭೆ ಸಂಪನ್ನ ಹರುಷೋ
ತ್ಕರುಷದಲಿ ಹಾರೈಸಲಿದ್ದರು
ಧರಣಿಪಾಲ ಕುಮಾರಕರು ಕೃಷ್ಣಾಂಘ್ರಿ ದರುಶನಕೆ ೩೦

ಬರವ ಕಾಣುತ ರಥವನಿಳಿದಂ
ಬುಜಹನಾಭನು ನಮಿಸಿದನು ನೃಪ
ವರ ಯುಧಿಷ್ಠಿರ ಭೀಮರಿಗೆ ತಕ್ಕೈಸಿದನು ನರನ
ಎಱಗಲಪ್ಪಿದನೊಲಿದು ಮಾದ್ರೇ
ಯರನು ಮುದದಲಿ ಹರುಷಮಯ ಸಾ
ಗರದಲೋಲಾಡಿಸಿದನಾ ಕುಂತೀಕುಮಾರಕರ ೩೧

ಬಳಿಕ ಸಾತ್ಯಕಿ ಮುಖ್ಯರಾನನ
ಗಳಲಿ ಪೂಜಿತರಾಗಿ ಕುಳ್ಳಿರ
ಲಲಘುಮಹಿಮನ ಹೊರಿಗೆ ಕುಂತೀದೇವಿ ನಡೆತರಲು
ಘಳಿಲನೆದ್ದತಿಗೌರವದಲಡಿ
ಗಳಿಗೆ ತಲೆವಾಗಿದನು ಮುದದಲಿ
ಸೆಳೆದು ಬಿಗಿಯಪ್ಪಿದಳು ಸೌಹಾರ್ದದಲಿ ಮುರಹರನ ೩೨

ಕುಶಲವಾರ್ತೆಗಳೆನೆಯುಲಂದಾ
ಕುಸುಮನಾಭನ ಚಾರು ಹಾಸೋ
ಚ್ಛ್ವಸಿತ ಕರುಣಾಪಾಂಗ ರಂಜಿತವದನ ಲಕ್ಷ್ಮಿಯನು
ಶ್ಶಿವದನೆ ನೋಡುತ್ತ ಮುಳುಗಿದ
ಳಸಮಸುಖಜಲ ಪೂರ್ಣ ಪುಳಕ
ಪ್ರಸರ ಪರಿತೋಷಾಬ್ಧಿಯಲಿ ತಲೆವಾಗಿ ಹರಿಪದಕೆ ೩೩

ತನಗೆ ಬಂದ ವಿಪತ್ಪರಂಪರೆ
ಯನುಭವವನದನೆಲ್ಲವನು ನೆನೆ
ನೆನೆದು ಕುಂತೀದೇವಿ ಬಾಷ್ಪನಿರುದ್ಧ ಕಂಠದಲಿ
ಜನಿತ ವೈಕ್ಲವ್ಯದಲಿ ನೆಱೆ ಕಂ
ಬನಿಯ ಕಡಲೊಳಗಾಳುತೇಳು
ತ್ತನುಪಮಂಗಿದನೆಂದಳತಿ ಗದುಗದಿಪ ಕಂಠದಲಿ ೩೪

ಅಂದೆ ಕುಶಲಿಗಳಾದೆವಾವೆಲೆ
ತಂದೆ ನಾವಂದೇ ಸನಾಥರ
ದೆಂದು ನೆನೆದೆಲೆದೇವ ಕಳುಹಿದೆ ಗಾಂದಿನೀಸುತನ
ಬಂದು ಪಾಂಚಾಲದಲಿ ನಾವಿರ
ಲಂದು ಕರುಣಿಸಿ ಕುಂಭಕಾರರ
ಮಂದಿರದಲಿತ್ತೈ ಭವತ್ಪದಯುಗಳ ದರುಶನವ ೩೫

ಅಱಿದು ಮಱಿದಾವನ ಪದಾಬ್ಜ
ಸ್ಮರಣೆಯನು ಮಾಡಿದಡೆ ಭವಭಯ
ಹರಿವುದೀ ಸಂಸಾರಿಗಳಿಗೆಂದರೆ ಭವತ್ಪದದ
ದರುಶನವು ಬಹು ಪುಣ್ಯವೆಂತಿದು
ದೊರಕಿದುದು ತನಗೆನುತ ಹರುಷೋ
ತ್ಕರುಷದಲಿ ಹೊಗಳುತ್ತಲಿದ್ದಳು ಕುಂತಿ ಮುರಹರನ ೩೬

ಎಂದಡೆಂದನು ನಗುತ ಮುರರಿಪು
ಮಂದಹಾಸದಲಂದು ನಿನ್ನಯ
ನಂದನರನೀ ದ್ರುಪದನಂದನೆಯ ಸ್ವಯಂವರಕೆ
ಬಂದು ಕಂಡೆನು ಕುಂಭಕಾರರ
ಮಂದಿರದಲಾದಿನವೆ ಹೋದೆನ
ದೊಂದು ಕಾರ್ಯವಿಶೇಷಸಾಧಕನಾಗಿ ನಿಜಪುರಕೆ ೩೭

ಸತ್ಯಭಾಮೆಯ ತಂದೆಯನು ಕೆಡೆ
ಗುತ್ತಿದಾ ಶತಧನ್ವನನು ಕೊಲ
ಲುತ್ತಮಾಂಗನೆ ಹೋದೆವಾದುರ್ಮತಿಯ ಬೆಂಬತ್ತಿ
ಮೃತ್ಯುವನು ಕಾಣಿಸಲು ಶಂಕಿತ
ಚಿತ್ತನಾದನು ರಾಮನೆನ್ನಲಿ
ಮತ್ತೆ ಕೇಳು ವಿದೇಹನಗರವನೈದಿದನು ಬಳಿಕ ೩೮

ಇನಿತುದಿನಪರಿಯಂತ ಬಾರದೆ
ಮನೆಯ ಮನ್ನೆಯರಾದೆವಗ್ರಜ
ನನುನಯವನನುಸರಿಸಲಾರತ್ನವನು ಕಾಣಿಸಲು
ಜನಪರೊಳಗೆ ವಿರೋಧ ನಲೆ ಸಂ
ಜನಿಸಿ ಹೋದವು ಕಿಱಿದುದಿನ ನಿ
ಮ್ಮಸಿಬರನು ನಂಭಾವಿಸುವೊಡರಿದಾಯ್ತು ತನಗೆಂದ ೩೯

ಪ್ರಾಣವೈವರು ತನಗೆ ನೀವೇ
ಪ್ರಾಣಚೇತನ ರೂಪು ನಿಮ್ಮಾ
ಕ್ಷೋಣಿ ತಳವನು ನಿಮಗೆ ಸಾಧಿಸಿ ಕೊಡುವೆನೆಂದೆಂಬ
ಕೇಣಿ ತನ್ನದು ತಾಯಿ ಚಿಂತೆಯು
ಮಾಣು ನೀನೆಂದೊಲಿದು ಮೃದುತರ
ಪಾಣಿ ತಳದಲಿ ತೊಡೆದು ವೈದಡವಿದನು ದೃಗುಜಲವ ೪೦

ಇಂತು ಸತ್ಪ್ರೇಮದಲಿ ಲಕ್ಷ್ಮೀ
ಕಾಂತನಾಬಾಲಕರು ಸಹಿತಾ
ಕುಂತಿಯನು ಸಂಭಾವಿಸುತ ಸಸ್ನೇಹ ಸೂಕ್ತಿಯಲಿ
ಸಂತಸವ ಮಾಡುತ್ತ ಸಜ್ಜನ
ಸಂತತಿಗೆ ಸತ್ಪುರಜನಕೆ ಸೀ
ಮಂತಿನೀಜನಗಳಿಗೆ ಹರುಷವನಿತ್ತ ನೊಲವಿನಲಿ ೪೧

ಪರಮಸುಖ ಸಪ್ರೇಮ ಸಂಭೃತ
ಪರವಶತೆಯಲಿ ಸಂದವಂದಿನ
ವರುಷಋತುಮಾಸಂಗಳಿಂದ್ರಪ್ರಸ್ಥವಾಸದಲಿ
ಸರಸ ನಯನಾಪಾಂಗ ಸಸ್ಮಿತ
ಭರಿತ ಮಂಗಳಸೂಕ್ತಿಗಳಲಪ
ಹರಿಸುತಿರ್ದನು ಸಕಲ ಪುರವಾಸಿಗಳ ಕಣುಮನವ ೪೨

೧೨

## ಪ್ರಾಗ್ಜ್ಯೋತಿಷ

ಅರಸ ಕೇಳೊಂದುದಿನ ದಿವಿಜೇ
ಶ್ವರನು ಬಂದನು ಸಕಲ ಲೋಕೇ
ಶ್ವರನೆನಿಪ ಗೋವಿಂದನಂಘ್ರಿಸರೋಜ ದರುಶನಕೆ
ಕೊರಗಿದಾನನಕಮಲದಲಿ ನಿಜ
ಪರಿಭವವನೆಲ್ಲವನು ಹರಿಪದ
ಸರಸಿಜಕೆ ತಲೆವಾಗಿ ಬಿನ್ನಹ ಮಾಡಿದನು ನಮಿಸಿ ೧

ದೇವ ನರಕಾಸುರನ ದೆಸೆಯಲಿ
ಜೀವಿಸುವಡಳಿದಾಯ್ತು ನಿಜಪದ
ಸೇವಕರಿಗವಧರಿಸುವುದು ತನ್ನೊಂದು ಬಿನ್ನಪವ
ದೇವವಧುಗಳಿಗಾಯ್ತು ತತ್ಪದ
ಸೇವೆ ತಾ ಮೊದಲಾಗಿ ಸುರರುಪ
ಜೀವಿಗಳು ಲೋಕಾಧಿಪರುಸಹಿತೆಂದನಮರೇಂದ್ರ ೨

ಅರ್ಥದಿಂದಭಿಮಾನದಿಂದ ನಿ
ರರ್ಥರಾದೆವು ಕೃಷ್ಣ ಕಾರು
ಣ್ಯಾರ್ಥಿಗಳು ನಾವೆನುತ ಮಣಿಮುಕುಟ ಪ್ರವೇಕದಲಿ
ತೀರ್ಥಪಾದ ಪದಾಬ್ಜಯುಗಳವ
ನರ್ಥಿಸಲು ನಸುನಗುತ ನಿಜ ಪರ
ಮಾರ್ಥರೂಪನು ನೆಗಹಿ ಕರುಣೇಕ್ಷಣದಲಿಂತೆಂದ ೩

ಏಳು ಮರುಳೆ ಮನೋವಿಷಾದವ
ಬೀಳುಕೊಡು ನಾನಿರಲು ಭಕ್ತರ
ಮೇಲೆ ಬೀಸುವ ಗಾಳಿ ಬಿರುಸಹುದೇ ನಿಧಾನಿಸಲು
ಶೀಲವನು ಸೀನಱಿಯೆ ಖಳನನು
ನಾಳಿನಲಿ ತೋಱಿಸುವೆನಂತಕ
ನಾಲಯದಲೆಂದಸುರರಿವು ಕಳುಹಿದನು ಸುರಪತಿಯ ೪

ಅತ್ತಲಮರಾಧೀಶ್ವರನ ಕಳು
ಹುತ್ತ ನೆನೆದನು ಮನದೊಳಗೆ ವಿಹ
ಗೋತ್ತಮನನಾಕ್ಷಣವೆ ಬಂದನು ಗರುಡನಾಳುವನ
ಚಿತ್ತವೃತ್ತಿಯನನುಸರಿಸಿ ನತ
ಮಸ್ತಕದಲಿರದೇಱಿ ನಡೆದನು
ಸತ್ಯಭಾಮಾದೇವಿಸಹಿತಸುರಾಂತಕನ ಪುರಕೆ ೫

ಕಂಡನಾಹಿಮಗಿರಿಯ ಬಹಳೋ
ದ್ದಂಡ ಶಿಖರಾಗ್ರದಲಿ ಮೆಱೆವಾ
ಖಂಡಲಾರಿಯ ಪುರವನಾ ಪ್ರಾಗ್ಜ್ಯೋತಿಷಾಹ್ವಯವ
ಚಂಡಗಿರಿ ಜಲಪಾವಕಾಸ್ತ್ರ
ಖಂಡ ಮುರ ಪಾಶಾವಳೀ 1ಪರಿ
ಖಂಡಿತ1 ಪ್ರಾಕಾರವನು ರಿಪುಭಟಸುದುರ್ಗವನು ೬

ಉರವಣಿಸಿ ಕೌಮೋದಕಿಯಲಿ
ಟ್ಟೊರಸಿ ಪ್ರಾಕಾರವನು ಹೊಕ್ಕನು
ಪುರವನಸುರಾರಾತಿ ಗಿರಿಮಯ ದುರ್ಗವನು ಕಳೆದು
ಉರುಳಿಸಿದನಸ್ತ್ರೌಘದಲಿ ದು
ರ್ಧರ ಮಹಾಶಸ್ತ್ರಾವಳಿಗಳ
ಬ್ಬರವನಾಗ್ನೇಯಾಸ್ತ್ರದಲಿ ಸದೆದನು ತಜ್ಜಲಪ ೭

1ಕ್ಷುರಪುಂಖಿತ1 (ಖ)

ಚಕ್ರದಲಿ ಮುರಪಾಶವನು ತಱಿ
ದಿಕ್ಕಿದನು ವಾರುಣದಲಗ್ನಿಯು
ಸೊಕ್ಕನುದುರಿಸಿ 1ಖಡುಗದಲಿ1 ಕ್ಷುರಮಾಲೆಗಳ ತಱಿದು
ಹೊಕ್ಕನಾ ದಾನವನ ಕೃತಕವ
ಮಿಕ್ಕು ನಿಮಿಷಾರ್ಧದಲಿ ಪುರವನು
ಜಕ್ಕುಲಿಸಿ ಪೊಳಗಿದನು ಶಂಖೋತ್ತಮುವನಡಿಗಡಿಗೆ ೮

ಸಿಡಿಲು ಹೊಡೆದಂದದಲಿ ತಲೆಯೊಡೆ
ದೊಡೆದವೋಲುಬ್ಬರದ ಶಂಖದ
ಕಡುಕಠೋರಧ್ವನಿಯನಾಲಿಸುತೆದ್ದು ಮೈಮುರಿದು
ಕಡುಗಿ ಮುರನೆಂಬವನು ಕಲ್ಪದ
ಕಡೆಯ ರುದ್ರನವೋಲು ಕಂಗಳು
ಕಿಡಿಗೆದಱೆ ಘನಸಿಂಹನಾದವ ಮಾಡಿ ಹೊಱವಂಟ ೯

ಐದು ಮುಖದಲಿ ಗಜರಿ ಗರ್ಜಿಸಿ
ಕೈದುವನು ಬರಸೆಳೆದು ಭುಜವನು
ಹೊಯ್ದು ಮಲೆವವರಾರು ತನ್ನೊಡನಮರದೈತ್ಯರಲಿ
ಕೈದುಗೊಳ್ಳೇಳೆನುತ ಹರಿಯನು
ಬೈದು ನವೆದುದು ನಿನ್ನ ಹೆಂಡತಿ
ಗೈದೆತನವೆನುತಿಟ್ಟನಾಶೂಲದಲಿ ಖಗಪತಿಯ ೧೦

ಉರಿಯನುಗುಳುತ ಗರುಡದೇವನ
ಶಿರದಲೆಱಗುವ ಶೂಲವನು ಕ
ತ್ತರಿಸಿ ಕೆಡಹಿದನೆಂಟುಬಾಣದಲಸುರರಿಪು ನಗುತ
ಕೆರಳಿ ಮುರನಬ್ಬಱಿಸಿ ಗದೆಯನು
ತಿರುಹಿ ತೀವ್ರಕ್ರೋಧದಲಿ ತನು
ಬಿರಿಯಲಿಟ್ಟನು ದುಷ್ಟಮರ್ದನನುರವನುರವಣಿಸಿ ೧೧

1ಪರಿಘದಲಿ1 (ಖ)

ಅಬ್ಬಱಿಸಿ ತೂಳ್ದಳಲಿ ನಭವನು
ಗಬ್ಬಱಿಸುತ್ತೈತರಲು ಚಕ್ರವ
ತುಬ್ಬಿದನು ತುದಿವೆರಳ ಸನ್ನೆಯಲವನತಲೆಗಳಿಗೆ
ಸರ್ಬಲೋಕೇಶ್ವರನು ಸಕಲ ಸು
ಪರ್ಬಜನವುಘೆಯೆನಲು ತಲೆಗಳ
ನುರ್ಬಿಗಿಳುಹಿದನೊಂದು ನಿಮಿಷಾರ್ಧಾರ್ಧ ಮಾತ್ರದಲಿ ೧೨

ಲೇಸೆನುತ ಮಲ್ಲಿಗೆಯ ಮಳೆಗಳು
ಸೂಸಿದುವು ಸುರವರವಿಮಾನದ
ಬೀಸಿಗೆಯ ಬಲುಮುಗಿಲ ಮೋಹರದಿಂದ ಭೂತಳಕೆ
ಮೀಸಲಳಿದುದು ಮುರನ ಜೀವವಿ
ನ್ನಾಶದಲಿ ದುರ್ಜಯನೆನಿಪ ನರ
ಕಾಸುರನ ಸಾಮರ್ಥ್ಯವೆನುತಿರ್ದುದು ಸುರಸ್ತೋಮ ೧೩

ಹಾಯೆನುತ ಹರಿದೈದಿ ದೂತನಿ
ಕಾಯವಾ ಮುರವಧೆಯನಾ ತಱು
ವಾಯಲಾತತ್ಪುತ್ರವಧೆಯ ವಿಚಿತ್ರ ಸಂಗತಿಯ
ಜೀಯೆನುತ ಬಿನ್ನವಿಸೆ ದೈತ್ಯರ
ರಾಯನೆದ್ದನು ಬಿಗಿದ ರೋಷದ
ಬೀಯ್ಯಗವನೊಡೆಮುರಿದ ಕಂಗಳ ರೌದ್ರವದನದಲಿ ೧೪

ನುಂಗುವಂತಿರೆ ಗಗನವನು ಮಾ
ತಂಗ ಮಲ್ಲನನೇಱಿ ದಾನವ
ಪುಂಗವನು ಬರುತಾಗುರುತ್ಮನ ಪಕ್ಷಮೂಲದಲಿ
ರಂಗನಾಥನನೆಸೆವ ಶಂಖ ರ
ಥಾಂಗ ಗದೆ ಶಾರ್ಙ್ಗಂಗಳೆಸೆವ ಭು
ಜಂಗಳಲಿ ಭಾರ್ಯಾಸಮನ್ವಿತನಾಗಿರಲು ಕಂಡ ೧೫

ಆತ್ತಲಸುರಾರಾತಿ ಬಹ ದೈ
ತ್ಯೋತ್ತಮನ ಕಾಣುತ್ತ ನಿಜಶಂ
ಖೋತ್ತಮವ ಮೊಳಗಿಸಿದನುನ್ನತ ಸಿಂಹನಾದದಲಿ
ಹತ್ತುದೆಸೆಗಳು ಮಾರ್ಮೊಳಗಲು
ದ್ವೃತ್ತ ದನುಜೇಶ್ವರನ ಪಡೆಗಪ
ಮೃತ್ಯುವಾಯ್ತೆನೆ ಭೀತಿಯನು ಬೀಱಿದನು ಪರಬಲಕೆ ೧೬

ಕೇಳುತವೆ ಖಳನದನು ಕಿಡಿಗಳ
ನಾಲಿಗಳಲುಗುಳುತ್ತ ಲಕ್ಷ್ಮೀ
ಲೋಲನನು ಕೊಳ್ಳೆನುತುರಿವ ಮಹಾಶತಘ್ನಿಯಲಿ
ಬೀಳಲಿಟ್ಟನು ಬೊಬ್ಬಿಱಿದು ಪಡೆ
ಮೇಲೆ ಕವಿದೆಸಲೊಂದು ನಿಮಿಷಕೆ
ಕಾಳಗದ ಕೈಮಾಟ ಕಂಗೆಡಿಸಿತು ಜಗತ್ರಯವ ೧೭

ಅದ್ದನಸುರಾರಾತಿ ಬಾಣಸ
ಮುದ್ರದಲಿ ನಿಮಿಷಾರ್ಧ ಮಾತ್ರದ
ಲೆದ್ದನೌರ್ವಾನಳನವೋಲೇನೆಂಬೆನದುಭುತವ
ಮುದ್ರಿಸಿದನನಿಬರ ಶರೌಘವ
ನದ್ರಿಧರನನುವಿನಲಿ ಭಟನನು
ಮುದ್ರಿಸಿದನಿಭತುರಗರಥಪತ್ತಿಗಳು ಕಡಿವಡೆಯೆ ೧೮

ಮತ್ತೆ ಕೊಂಡನು ಕಾರ್ಮುಕವನು
ದ್ವೃತ್ತನಾದೊಡೆ ನೋಡೆನುತ ಪುರು
ಷೋತ್ತಮನನೆಚ್ಚನು ಮಹಾಶರಜಾಲದಲಿ ಜಡಿದು
ಹೊತ್ತುಹೋಗದ ಸಮರಶೌರ್ಯವೆ
ನುತ್ತ ಬಹುಶರಜಾಲವನು ಕಡಿ
ದತ್ತಲೇ ಬೀಸಾಡಿದನು ನಸುನಗುತ ಮುರವೈರಿ ೧೯

ನಗುವೆ ನೀನೆಮ್ಮುವನು ಹರಿಹರ
ನಗುವಡಜಭವ ಮುಖ್ಯರಂಜುವ
ರುಗುಳಿಸುವೆನುಬ್ಬಾಳುತನವನೆನುತ್ತ ಕಡುಮುಳಿದು
ತೆಗೆದನರ್ಧೇಂದ್ವಾಕೃತಿಯ ಹೊಗ
ರೊಗುವಬಾಣವನದನು ತೊಡಲಾ
ಜಗದಪತಿ ಕಡಿಗಳೆದನಸುರನಕೈಯ್ಯಕಾರ್ಮುಕವ ೨೦

ಅಕ್ಕಟೇಗೋವಿಂದನಲಿ ಬಲ
ವಿಕ್ರಮಕೆ ನೆಱೆ ಹಾನಿಯೇ ಕೈ
ಯಿಕ್ಕಿದನು ಕೃಷ್ಣನನು ಕೊಲಲು ಮಹಾತ್ರಿಶೂಲದಲಿ
ನಕ್ಕನಸುರಾರಾತಿ ನಿನಗಿದು
ತಕ್ಕುದೆಲವೋ ಯೆನುತ ತಲೆಯನು
ಚಕ್ರದಲಿ ತಡೆಗಡಿದನಭ್ರದಲಮರರುಘೆಯೆನಲು ೨೧

ಬಿದ್ದುದವನಿಗೆ ತಾಯ ಪದದಲಿ
ಬಿದ್ದು ಕಳುಹಿಸಿಕೊಂಬವೊಲು ತಲೆ
ಹೃದ್ಯಮಣಿಕುಂಡಲಮುಕುಟಮಣಿಕಿರಣ ಧಳಧಳಿಸೆ
ಭದ್ರವಾಯ್ತೆನಲಮರರಭ್ರದ
ಲಿರ್ದರೀಕ್ಷಿಸಿ ಪರಮ ಋಷಿಗಳ
ವದ್ಯನನು ಹೊಗಳುತ್ತ ಕಱೆದರು ಪುಷ್ಪವೃಷ್ಟಿಗಳ ೨೨

ಆ ಮಹಾಸುರನಿಕರ ಸಹಿತಾ
ಭೂಮಿಜಾತನ ವೈಭವವ ಲ
ಕ್ಷ್ಮೀಮನೋರಮಣನೀಕ್ಷಿಸಲು ಪುರವಾಸಿ ಜನಸಹಿತ
ಕ್ಷೇಮಧಾಮನು ಹೊಕ್ಕನಮರ
ಸ್ತೋಮ ಕೈವಾರಿಸಲು ಪೌರ
ಪ್ರೇಮದತ್ತಾರ್ಘ್ಯಾದಿ ಸತ್ಕಾರವನು ಕೈಕೊಳುತ ೨೩

ಕಂಡನದಱೊಳು ಕಮಲದೃಶನು
ದ್ದಂಡಮಣಿಪರ್ವತವನಿದಿರಲಿ
ಕಂಡನಮೃತಸ್ರಾವಿ ವರುಣಚ್ಛತ್ರ ಮಂಡಲವ
ಕೊಂಡು ಹೋಗಿದನೆನುತ ತೆಗೆದಾ
ಖಂಡಲಂಗಾರತ್ನಗಿರಿಯನ
ಖಂಡವಿಮಳಚ್ಛತ್ರವನು ವರುಣಂಗೆ ನೇಮಿಸಿದ ೨೪

ಕಳುಹಿ ಸುರರನು ಹೊಕ್ಕನಸುರನ
ನಿಳಯವನು ತ್ರೈಲೋಕ್ಯ ವೈಭವ
ನಿಳಯವನು ಬಳಿಕಲ್ಲಿ ಕಂಡಳು ಬಂದು ಮುರಸರನ
ಲಲಿತಪದವನು ಭೂಲಲನೆ ತ
ಲ್ಲಳಿಸುವಾ ನಿಜಪೌತ್ರನನು ತಂ
ದಲಘುಮತಿ ಕೆಡಹಿದಳು ಕಾಲಲಿ ಕಮಲಲೋಚನನ ೨೫

ನಾಲರತುನದ ಕುಂಡಲಂಗಳ
ನಾ ಲಸಿತ ವರ ವೈಜಯಂತಿಯ
ಮಾಲೆಯನು ತಂದಿತ್ತು ಪದದಲಿ ನಮಿಸಿ ಕೈಮುಗಿದು
ಪಾಲಿಸೆನ್ನನು ಕೃಷ್ಣ ಪರಮ ಕೃ
ಪಾಲಯನೆ ನಿಜಚರಣ ದಾಸ್ಯವ
ನೇಳಿದಿಟವನು ಮಾಡದೆಂದಳು ಚರಣವನು ಹಿಡಿದು ೨೬

ಹಲವು ಪರಿಯಲಿ ಕೀರ್ತಿಸಿದಳಂ
ದಲಘುಮಹಿಮನ ಮಹಿಮೆಯನು ಭೂ
ಲಲನೆ ಭಜಿಸುತ ಬಹುಳತರ ನಿಜಭಾವ ಭಕ್ತಿಯಲಿ
ಪುಳಕ ಭಾರೋದ್ಭಿನ್ನ ನಯನೋ
ದ್ಗಳಿತ ಜಲಧಾರೆಯಲಿ ಕೃಷ್ಣನ
ಲಲಿತ ಪದವನು ನಾದುತಿಂತೆಂದಳು ಮನೋಗತವ ೨೭

ನೀನೊಲಿದು ತನಗಿತ್ತ ಮುನ್ನೀ
ಸೂನುವನು ಮತ್ತಿಂದು ಕೊಂದಡೆ
ಹಾನಿ ಯಾವುದು ತನಗೆ ಸುರಸುಜನೈಕರಕ್ಷಕನೆ
ಮಾನನಿನ್ನದು ನಿನ್ನ ಭಕ್ತರ
ಹಾನಿ ನಿನ್ನದು ರಕ್ಷಿಸೀ ಮ
ತ್ಸೂನುವನು ಕಾರುಣ್ಯಚಿತ್ತದಲೆಂದಳಬುಜಾಕ್ಷಿ ೨೮

ದೇವಿ ಸಾಕೇಳಂಜದಿರು ನಿಜ
ಭಾವಭಕ್ತಿಗೆ ಮೆಚ್ಚಿದೆನು ಕೈ
ಗಾವೆನೇಳೆನುತೆತ್ತಿದನು ಭಗದತ್ತನನು ಬಿಡದೆ
ಸೇವಕನೆ ನೀನಂಜಬೇಡೆನು
ತೋವಿ ಮೈದಡವಿದನು ಕೊಟ್ಟನು
ದೇವರಿಪು ರಾಜ್ಯವನು ಪಟ್ಟವಕಟ್ಟಿ ಪತಿಕರಿಸಿ ೨೯

ಬಳಿಕ ಭೌಮ ನಿರುದ್ಧ ಕನ್ಯಾ
ನಿಳಯವನು ದೈತ್ಯಾರಿ ಹೊಕ್ಕನು
ಬಳಲುವುತ್ಪಲವನಕೆ ಪೂರ್ಣಶಶಾಂಕನಂದದಲಿ
ಲಲನೆಯರು ದೂರದಲಿ ಕೃಷ್ಣನ
ಚೆಲುವಮೂರ್ತಿಯನೀಕ್ಷಿಸುತ್ತವೆ
ಘಳಿಲನೆದ್ದರು ಕಾಣುತಸುವನು ತನುಗಳಂದದಲಿ ೩೦

ಪರಮ ಮಂಗಳಮೂರ್ತಿಯನು ಪಂ
ಕರುಹಮುಖಿಯರು ನೋಡಿ ಮನದಲಿ
ಮರುಳುಗೊಂಡರು ಮನುಮಥನ ಮಸೆದಲಗಿನುಪಟಳಕೆ
ವರಿಸಿದರುತಮತಮಗೆ ಲಕ್ಷ್ಮೀ
ವರನೆ ವರನಾಗೆಮಗೆನುತ್ತಾ
ವುರುತರ ಪ್ರೇಮಾನುಬಂಧನ ಪಾರವಶ್ಯದಲಿ ೩೧

ಮುಂದೆ ಚಿತ್ರದವೋಲು ಸತಿಯರು
ಸಂದಣಿಸಿ ಕಂಗಳಲಿ ನೆಱೆ ಕುಡಿ
ವಂದದಲಿ ಕಮನೀಯಮೂರ್ತಿಯ ಮಾಣದೀಕ್ಷಿಸುತ
ನಿಂದಿರಲು ಕಮಲಾಕ್ಷಿಯರ ಮನ
ದಂದವನು ಕಾಣುತ್ತ ಕುಳುಹಿದ
ನಂದಣಂಗಳೊಳನಿಬರನು 1ನಿಜಪುರಕೆ ವಹಿಲದಲಿ1 ೩೨

ನೀಱೆಯರ ತನುರಕ್ಷೆಗೋಲೆಯ
ಕಾಱರನು ಕಳುಹಿದನು ಧನವನು
ಹೇಱಿದನೆತ್ತುಗಳಲೋರಂತಾ ಪುರಾಂತರದ
ಸಾಱಿಸಿದನೊಲಿದಭಯಹಸ್ತವ
ತೋಱಿದನು ಪರಿಜನಕೆ ಹರುಷವ
ಬೀಱಿದನು ನಿತ್ಯಾತ್ಮ ಕೃಷ್ಣನಶೇಷಸುರಕುಲಕೆ ೩೩

## ೧೩
## ಅಗ್ರಪೂಜೆ

ಇರಲು ಬಂದನು ದೂತನೊಬ್ಬನು
ವರಗಿರಿವ್ರಜದಿಂದ ಪಡಿಹಾ
ಱರಿಗೆ ಬಿನ್ನಹ ಮಾಡಲವರೈತಂದರೋಲಗಕೆ
ಕರಪುಟವ ಮುಗಿದೆಱಗಿ ಚರಣಾಂ
ಬುರುಹದಲಿ ಬಿನ್ನವಿಸಲಾತನ
ಕರಸಿ ಕಾಣಿಸಿಕೊಂಡನಸುರಾರಾತಿ ಕರುಣದಲಿ ೧

1ವಿಭವದಲಿ ನಿಜಪುರಕೆ1 (ಕ)

ಬಂದನೋಲಗದೊಪ್ಪವನು ನಾ
ನಂದದಲಿ ನೋಡುತ್ತ ಮಝು ಭಾ
ಪಿಂದುಧರ ಕಮಲಜಮಹೇಂದ್ರರಿಗುಂಟೆ ಈ ವಿಭವ
ಎಂದು ತಲೆದೂಗುತ್ತ ಚರಣ
ದ್ವಂದ್ವದಲಿ ವ್ಯೆಯಿಕ್ಕಿ ಕೆಲದಲಿ
ನಿಂದು ಹಾರುತ್ತಿರ್ದನೊಲವನು ದೂತನಚ್ಯುತನ ೨

ಆರು ನೀನೆಲ್ಲಿಂದ ಬಂದೆಯು
ದಾರುಕಳುಹಿದರೇನುಕಾರಿಯ
ವಾರ ದೂತನೆನುತ್ತ ಕರುಣಾವನಧಿ ಬೆಸಗೊಳಲು
ಚಾರು ಚರಣದ ಹೊರೆಯಟ್ಟದ
ಸಾರಲಿಖಿತವನಿರಿಸಿ ಚಿತ್ತವ
ಧಾರೆನುತ ಕೈಮುಗಿದು ಬಿನ್ನಹವಮಾಡಿದನು ಹದನ ೩

ಬಂದೆ ನಾನು ಗಿರಿವ್ರಜಾಹ್ವಯ
ದಿಂದ ದೇವರ ಚರಣ ದರುಶನ
ಕೆಂದು ಕಳುಹಿದರಖಿಳ ಪೃಥ್ವೀಶ್ವರರು ವಿನಯದಲಿ
ಮುಂದೆ ಚಿತ್ತವಿಸುವುದು ದೇವರು
ಬಂದ ಹದನನೆನಲ್ಕೆ ಕೇಳಿದ
ನಂದು ಕರುಣಾವನಧಿ ಕಳುಹಿದ ಬಿನ್ನವತ್ತಳೆಯ ೪

ಎಕ್ಕತುಳದಲಿ ಕಾದಿ ಮಾಗಧ
ನಿಕ್ಕಿದನು ಸಂಕಲೆಯಲೆಮ್ಮನು
ಸಿಕ್ಕಿದೆವಲ್ಲೈ ಕೃಷ್ಣ ಬಲವಂತನ ವಿರೋಧದಲಿ
ಲೆಕ್ಕವಿಲ್ಲದ ನೃಪರದಾರಿಗೆ
ಕಕ್ಕುಲಿತೆವಡಲೇನಹುದು ಮಱೆ
ಪೊಕ್ಕೆವಾವೆಮ್ಮೊಡೆಯ ಭವದೀಯಾಂಘ್ರಿರೇಣುಗಳ ೫

ಈವುದೆಮಗೆಲೆ ಕೃಷ್ಣ ನಿಜಚರ
ಣಾವಲೋಕನವೆಂಬ ಸದೃಢ ಕ
ರಾವಲಂಬನವೊಲಿದು ಭವಭಯ ಕೂಪ ಪತಿತರಿಗೆ
ಕಾವುದೆಮ್ಮನು ಕರುಣದಲಿ ನಿಜ
ಸೇವಕರನೆನುತಿರಲು ಸಭೆದಲಿ
ದೇವಋುಷಿ ನಾರದನು ವೈಡೋಜಿದನು ಯದುಸಭೆಗೆ ೬

ಕೆಂಜೆಡೆಯ ನಾರದನ ಬರವನು
ಕಂಜನಾಭನು ಕಂಡು ನಿಜಕರ
ಕಂಜಮುಕುಳವ ಮಕುಟದಲಿ ಧರಿಸುತ್ತ ಜಯಯೆನುತ
ರಂಜಿಸುವ ನಂದಣಿಯ ಸಭ್ಯರ
ಪುಂಜದಲಿ ನಡೆದಿದಿರುಗೊಂಡು ನಿ
ರಂಜನನು ಕುಳ್ಳಿರಿಸಿದನು ನಿಜಪೀಠದಲಿ ಮುನಿಯ ೭

ನೆರವಿ ಸಹಿತರ್ಚಿಸುತ ಮುನಿಪದ
ಸರಸಿಜಕೆ ತಲೆವಾಗಿ ಮುಕುಳಿತ
ಕರಸರೋರುಹನಾಗಿ ಬಿನ್ನವಿಸಿದನು ಮುನಿಪತಿಗೆ
ಧರೆಯಲೆಮಗಿತ್ತಲು ಮಹಾತ್ಮರು
ದರುಶನಕೆ ಗೋಚರರೆ ನಿಮ್ಮಡಿ
ಚರಿಸುತಿಹುದು ಜಗದ್ಧಿತಾರ್ಥವಿದೆಂದನಸುರಾರಿ ೮

ಧಾರಿಣಿಯಲೇನುಂಟು ಸಂಪ್ರತಿ
ಧಾರಿಣೀಪತಿಗಳಲಿ ಪಾಂಡುಕು
ಮಾರರೆಂತಿಹರದನು ಕರುಣಿಸಬೇಹುದೆನಗೆನಲು
ನಾರದನು ನಸುನಗುತ ನುಡಿದನು
ದಾರ ಗುಣನಿಧಿ ಸಕಲ ಜೀವಾ
ಧಾರ ಚೇತನ ಸಾಕ್ಷಿ ನಿನಗಜ್ಞಾನವೇನೆಂದ ೯

ಯಜಿಸುವನು ಯಮನಂದನನು ನಿಜ
ಭುಜಬಲಾ ಸಾಧಿತ ಮಹೀಪತಿ
ವಿಜಯದಲಿ ವರರಾಜಸೂಯ ಮಹಾಧ್ವರಾಂಗದಲಿ
ಅಜಭವಾಮರ ವಂದ್ಯ ಚರಣಾಂ
ಬುಜನೆ ನಿನ್ನನು ಕರೆಯ ಬಂದನು
ಭಜಕರಲ್ಲಿಗೆ ದೇವ ಬಿಜಯಂಗೆಯ್ಯಬೇಕೆಂದ ೧೦

ಎನಲು ನಗುತುದ್ಧವನ ಮೊಗವನು
ದನುಜಹರನೀಕ್ಷಿಸಲು ನುಡಿದನು
ವಿನಯದಲಿ ತಲೆವಾಗಿ ಬಿನ್ನಹವೆನುತ ಕೈಮುಗಿದು
ಮುನಿಯ ವಚನವಭೀಷ್ಟ ವೀ ದೂ
ತನ ವಚನ ಕರ್ತವ್ಯವೆಱಡಱ
ಲನುಪಮಾಮಳಕೀರ್ತಿ ವಿಸ್ತೃತವಹುದು ತಮಗೆಂದ ೧೧

ಅವಧರಿಸು ಕರ್ತವ್ಯ ಮಱಿವೊ
ಕ್ಕವರಕಾವುದು ರಾಯರಿಗೆ ಪಾಂ
ಡವರು ಮಾಡುವ ಮಖಮಹೋದಯ ಹೇತುವದು ನಮಗೆ
ಅವನಿಪತಿಗಳು ಸಹಿತ ದಿಕ್ಚ
ಕ್ರವನು ಜಯಿಸದೆ ರಾಜಸೂಯದ
ಸವನವದು ಸಂಪನ್ನವಾಗದು ಕೃಷ್ಣ ಕೇಳೆಂದ ೧೨

ಎನಲುಭಾಪೆನುತೊಪ್ಪಿದನು ಮುನಿ
ಜನವದೇ ಲೇಸೆಂದುದುದ್ಧವ
ನನುಪಮೋಕ್ತಿಗೆ ಮೆಚ್ಚಿದನು ಮುರವೈರಿ ಮನ್ನಿಸುತ
ಮನಕೆ ಬಂದುದು ಸಕಲಯಾದವ
ಜನಪರಿಗೆ ಸನ್ನದ್ಧವಾಗಲಿ
ವಿನುತ ಯಾದವ ಸೈನ್ಯಸಾಗರವೆಂದನಸುರಾರಿ ೧೩

ಅಂಜದಿರಹೇಳೆಲ್ಲರಿಗೆ ರಿಪು
ಭಂಜನವ ಮಾಡುವೆನು ನೀನಿದ
ಕೆಂಜಲಿಸದಿರು ಮನದೊಳಗೆ ಸಂಶಯವನೆಂದೆನುತ
ಕಂಜನಾಭನು ನಗುತ ನಿಜಕರ
ಕಂಜವನು ನೆಗೆಹಿದನು ನತಪವಿ
ಪಂಜರನು ಕಳುಹಿದನು ನೃಪದೂತನನು ಪತಿಕರಿಸಿ ೧೪

ದನುಜಹರನೇಱಿದನು ರಥವನು
ಮುನಿಸಹಿತ ಹೊಱವಂಟನೊಪ್ಪಿರೆ
ವನಿತೆಯರದಂಡಿಗೆಗಳೊಡನೈತರಲು ಸಂದಣಿಸಿ
ಕನಕಮಯಶಿಬಿಕೆಗಳಲರ್ಭಕ
ರನುಸರಿಸೆ ಪ್ರದ್ಯುಮ್ನ ಸಾಂಬಾ
ದ್ಯನಘವೀರ ನಿಕಾಯ ಬರೆ ಕರಿತುರಗನಿಕರದಲಿ ೧೫

ತಂದೆ ಕೇಳೆಲೆ ಭೂಪ ನಿನ್ನವ
ರೊಂದು ಭಾಗ್ಯದ ಬೆಳೆಸಿರಿಯ ನೇ
ನೆಂದು ಒಣ್ಣಿಸಬಹುದು ಬಹಳ ಮನೋನುರಾಗದಲಿ
ಬಂದನಸುರಾರಾತಿ ದೂತರ
ವೃಂದ ಸುಳಿದುದು ಮುಂದೆ ಕುಂತೀ
ನಂದನರ ನಗರಿಯನು ಕೃಷ್ಣಾಗಮನ ವಾರ್ತೆಯಲಿ ೧೬

ದೂರದಿಂದಸುರಾಂತಕನ ಹೊಂ
ದೇರನೀಕ್ಷಿಸುತಶ್ರುಜಲದಲಿ
ಮೇರೆ ದಪ್ಪಿದವಕ್ಷಿಗಳು ತನುಪುಳಕ ಭಾರದಲಿ
ಭಾರಿಸಿತು ಮುಕುಳಿತ ಕರಾಂಜಳಿ
ಸೇರಿದುವು ಮಸ್ತಕಕೆ ಪಾಂಡವ
ಧಾರಿಣೀಪತಿ ಬಂದು ಕಂಡನು ಕೃಷ್ಣನಂಘ್ರಿಗಳ ೧೭

ಉರದಲಪ್ಪಿ ಮುಕುಂದನಂಗದ
ಪರಿಮಳವನಾಘ್ರಾಣಿಸುತ ಮೈ
ಮಱೆದರಾ ಪಾಂಡವರು ಪರಮಾಹ್ಲಾದದಲಿ ಮುಳುಗಿ
ಸಿರಿಮೊಗವ ನೋಡುತ್ತ ಕಂಗಳು
ಕರಗಿದುವು ಬೇಱೊಂದು ವಿಷಯಾಂ
ತರವನಱಿಯದ ಚಿತ್ತವೃತ್ತಿ ಮಹಾಮಹೀಶ್ವರರ ೧೮

ನಂದಣಿಸಿದರು ಮುಂದೆ ಹೊಸಹೊ
ಸ್ನಂದಣಂಗಳಲಖಿಳ ಯಾದವ
ವೃಂದ ವನಿತಾನಿವಹದಲಿ ಗೋವಿಂದನರಸಿಯರ
ಗೊಂದಣದ ದಂಡಿಗೆಗಳೈದಲು
ಮುಂದೆ ಪುರಜನವಿದಿರುಗೊಳಲಾ
ನಂದದಲಿ ದನುಜಾರಿ ಹೊಕ್ಕನು ಪಾಂಡವರ ಪುರವ ೧೯

ಬಂದು ಕುಂತೀದೇವಿ ಪರಮಾ
ನಂದದಲಿ ತೆಗೆದಪ್ಪಿದಳು ಗೋ
ವಿಂದನನು ಕಾಲ್ಗೆಱಗಲಧಿಕ ಮನೋನುರಾಗದಲಿ
ಇಂದುಮುಖಿ ದ್ರೌಪದಿ ಸುಭದ್ರೆಯ
ರಂದು ತಲೆವಾಗಿರಲು ಕೃಷ್ಣನ
ವಂದ್ಯ ಚರಣಂಗಳಿಗೆ ಸಂಭಾವಿಸಿದನರಸಿಯರ ೨೦

ದಿನದಿನಕೆ ಹೊಸವರಿಗಳಲಿ ಭೋ
ಜನ ವಸನ ಮಣಿಭೂಷಣಂಗಳ
ಲನುಪಮನ ಸತ್ಕರಿಸಿ ದಣಿಯನು ಯಾದವೋತ್ತಮರ
ದನುಜಹರನಿಂತಾಯುಧಿಷ್ಠಿರ
ಜನಪನನು ರಾಗೋಪಲಾಲಿತ
ಘನತರ ಪ್ರೀತಿಯನು ಸಲಿಸುತ್ತಿರ್ದನೊಲವಿನಲಿ ೨೧

ಸಂದವೀಪರಿ ಕೆಲವುದಿನ ಸಾ
ನಂದದಲಿ ವೈಮಜಿಸಿದವೋಲು ಮು
ಕುಂದನೊಡನೆಯೆ ಖೇಳಮೇಳದಲಾ ನೃಪಾಲರಿಗೆ
ಒಂದುದಿನ ನೆರೆದಖಿಳರಾಯರ
ವೃಂದದೊಡ್ಡೋಲಗದಲೀನೃ
ತಂದೆ ಕರೆಸಿದೆ ನನ್ನನೆಂದನು ನಗುತ ಮುರವೈರಿ ೨೨

ಕೇಳುತಿದ್ದನು ನೃಪತಿ ಮುಕುಟದ
ಮೇಲೆಕರಪುಟವೆಸೆಯೆ ಲಕ್ಷ್ಮೀ
ಲೋಲನಂಘ್ರಿಗೆ ನಮಿಸಿ ವಿನಯದಲಂದು ಕೈಮುಗಿದು
ಹೇಳಲಮ್ಮೆನು ಕೃಷ್ಣಪೂರ್ವ ನೃ
ಪಾಲರಿಂಗಿಲ್ಲದ ಮನೋರಥ
ವಾಳಿಗೊಂಡುದಲೈ ನಿಜಾಂತರ್ಮನವನಿದನೆಂದ ೨೩

ಕರೆಸಿದೆನು ಬಪ್ಪಂಗೆಸೇರದು
ಸುರಪನೋಲಗದಿರವು ಗಡ ಮುನಿ
ವರನ ನುಡಿ ದಿಟ ರಾಜಸೂಯಾಧ್ವರವ ಮಾಡಿದರೆ
ದೊರಕುವುದುಗಡ ಮಾಡಲಂಗೀ
ಕರಿಸಿದೆನು ಸಂಕಲ್ಪ ನಿವ್ಕ್ರಡಿ
ಕರುಣಿಸಿದಡಹುದೆನುತ ತಲೆವಾಗಿದನು ಹರಿಪದಕೆ ೨೪

ಆವುದರಿದೆಲೆ ಕೃಷ್ಣ ನಿಜಪದ
ಸೇವಕರಿಗಿದು ಘನವೆ ನೋಡಲಿ
ದೇವದಾನವ ಮಾನವರು ನಿನ್ನವನ ಸಾಹಸವ
ದೇವ ಕರುಣಿಸಬೇಹುದೆನುತಾ
ಭೂವರನು ತಲೆವಾಗುತಿರೆ ರಾ
ಜೀವನಾಭನು ನಗುತ ನೆಗಹಿದನವನಿಪನ ಶಿರವ ೨೫

ಏನರಿದು ನಿನಗರಸ ನಿಸ್ನಾ
ಧೀನದಲಿ ತಾನಿರಲು ಕಳುಹು ನಿ
ಜಾನುಜರನೆಲ್ಲರನು ದಿಗ್ವಿಜಯಕ್ಕೆ ಬೇಗದಲಿ
ಆನಲಿಱುವುದು ನಯಗುಣದ ಸಂ
ಧಾನವುಳ್ಳರೆ ಧನವನವರ
ಸ್ಥಾನಮಾನ್ಯವನುಳಹಿ ಕೊಂಬುದು ನೀತಿನಮಗೆಂದ ೨೬

ಎನೆ ಹಸಾದವೆನುತ್ತ ಕರೆಸಿದ
ನನುಜರನು ಸಹದೇವ ಸೃಂಜಯ
ರನು ಸರಾಗದಲಟ್ಟಿದನು ದಕ್ಷಿಣ ದಿಶಾವರಕೆ
ವಿನುತ ನಕುಲನ ಪಡುವದೆಸೆಗ
ರ್ಜುನನನುತ್ತರದೆಸೆಗೆ ಭೀಮನ
ನನಿಮಿಷೇಂದ್ರನ ದೆಸೆಗೆ ಕೇಕಯ ಮಾದ್ರೆಯರು ಸಹಿತ ೨೭

ಗೆಲಿದು ದಿಕ್ಚಕ್ರವನು ತೋಱಿದ
ರಲಘುಧನವನು ನೃಪತಿಗಂದಾ
ಯ್ತುಳಲು ಮಗಧನೃಪಾಲನನು ಗೆಲಲಱಿಯದವನಿಪಗೆ
ಬಳಿಕ ಕೃಷ್ಣಾರ್ಜುನ ವೃಕೋದರ
ರೊಳಗುಮಾಡಿ ಧರಾಮರಾಂಗದ
ಬಳಕೆಯಲಿ ಬೇಡಿದರು ರಣವನು ಕಾದಿದನು ಭೀಮ ೨೮

ಕೊಂದನವನನು ಭೀಮನಾಗೋ
ವಿಂದನಂಘ್ರಿಯ ಸನ್ನಿಧಿಯ ಬಲ
ದಿಂದ ತೋಱಿದ ಸಂಜ್ಞೆಯಲಿ ಸಹದೇವನನು ನೃಪನ
ನಂದನನನಲ್ಲಿರಿಸಿ ಭೂಪರ
ವೃಂದದಾಯಾಸವನು ನೋಡಲು
ಮಂದಿರವನಸುರಾರಿ ಪೊಕ್ಕನು ಮಗಧ ಭೂಮಿಪನ ೨೯

ಬಾಡಿದುತ್ಪಲವನದೆಡೆಗೆ ಶಶಿ
ಮೂಡಿಬಂದಂತಾಯ್ತು ನೆಱೆವನೆ
ಕೂಡೆ ಮಂಗಳವಾಯ್ತು ನಿರ್ಬಂಧನದ ಸಂಕ್ಲೇಶ
ಓಡಿದುದು ನೃಪರಿಂಗೆ ತನುಬಲ
ಮೂಡಿದುದು ಬಡನದಿಗಳಿಂಗಾ
ಷಾಢಕಾಲದ ವೃಷ್ಟಿ ಪುಷ್ಟಿಯನೀವ ತೆಱನಾಯ್ತು ೩೦

ಧನ್ಯರಾದೆವು ಕೃಷ್ಣ ಬಹಳ ಕೃ
ಪಾರ್ಣವನೆ ನಿನ್ನೀ ಸುರಾವಳಿ
ದುರ್ನಿರೀಕ್ಷ್ಯವೆನಿಪ್ಪ ಚರಣಾಂಭೋಜವನು ಕಂಡು
ಮಾನ್ಯನೆಮಗೀಮಗಧನೃಪತಿ ದು
ರನ್ವಯವೆನಿಪ್ಪೀ ಭವತ್ಪದ
ಸನ್ನಿಧಿಯ ತೋಱಿಸಿದನೆಂದರು ನೃಪರು ಕೈಮುಗಿದು ೩೧

ಎಂದು ನಿಜ ಚರಣಾರವಿಂದ
ದ್ವಂದ್ವದಲಿ ಮೈಯಿಕ್ಕಿ ಭೂಪರ
ವೃಂದ ಹೊಗಳುತ್ತಿರಲು ಜಯರವ ಸಂಸ್ತವಂಗಳಲಿ
ಮಂದಹಾಸದಲಸಿಬರಸು ಗೋ
ವಿಂದನಾಮಾಗಧ ನೃಪಾಲನ
ನಂದನಗೆ ನೇಮಿಸಿದನುವಚರಿಸೆಂದು ಭೂಮಿಪರ ೩೨

ಒಡಲು ತಾನೆಲ್ಲಿದ್ದಡೇನಿದು
ಜಡವಲಾ ಮನದೊಳಗೆ ತನ್ನನು
ಬಿಡದೆ ಭಾವಿಸುತಿಹುದು ಕೀರ್ತಿಸುತೆನ್ನ ಗುಣಗಣವ
ಒಡನಿಹೆನು ತಾನವರಿಗೆನುತು
ಗ್ಗಡದ ಕಾರುಣ್ಯದಲಿ ತಾ ಕಿಱಿ
ದೆಡೆಯು ಕಳುಹಿ ಕೃಪಾಜಲಧಿ ಮರಳಿದನು ನೃಪಕುಲವ ೩೩

ಬಳಿಕ ಮಾಗಧರಾಜ್ಯವನು ಕೈ
ಕೊಳಿಸಿ ಸಹದೇವಂಗೆ ಪಟ್ಟವ
ನೊಲಿದು ಫಲುಗುಣಸಹಿತ ಶಕ್ರಪ್ರಸ್ಥಪುರವರಕೆ
ನಳಿನನಾಭನು ಬರುತ ಶಂಖವ
ಮೊಳಗಿಸಿದನಾ ಧರ್ಮನಂದನ
ನಳಲನಾಱಿಸುವಂತೆ ಭುವನಾವಳಿಗಳಳ್ಳಿಱಿಯೆ ೩೪

ಕೇಳಿ ಶಂಖಧ್ವನಿಯನವನೀ
ಪಾಲಮುಖ್ಯರು ಮಗಧಪೃಥ್ವೀ
ಪಾಲನವಸಾನವನು ನಿಶ್ಚಯಿಸಿದರು ಮನದೊಳಗೆ
ತೂಳಿದುದು ತನುಪುಳಕ ಸನ್ಮತ
ದೋಳಿಗೆಯಲೈತಂದು ತನ್ನಯ
ಕಾಲಿಗೆಱಗಿದಡಪ್ಪಿದನು ಕೃಷ್ಣಾರ್ಜುನಾನುಜರ ೩೫

ಅವನಿಪತಿಗಱುಹಿದರು ಬಹಳಾ
ಹವದ ಹದನನು ಕೇಳುತಿದ್ದನು
ನವರಸಾಮೃತಪುಳಕಪೂರದಲರಸನಡಿಗಡಿಗೆ
ವಿವರಿಸುವಡರಿದಾಯ್ತು ನೃಪನು
ತ್ಸವದ ಧಾರಣೆ ನುಡಿಗಳಡಗಿದ
ವವಿರಳಾಶ್ರುನಿರುದ್ಧಕಂಠದಲರಸಕೇಳೆಂದ ೩೬

ಋತ್ವಿಜರು ಯಜ್ಞಾಂಗ ಭೂಮಿಯ
ನುತ್ತರಿಸಿವ ಸುವರ್ಣಹಲದಲಿ
ವಿಸ್ತರಿಸಿ ವೈದಿಕವಿಧಾನದಲಗ್ನಿಹೋತ್ರವನು
ಉತ್ತಮಾಧ್ವರ ದೀಕ್ಷೆಯನು ಕೈ
ವರ್ತಿಸಿದರವನಿಪಗೆ ಸುರರಿಗೆ
ತುತ್ತನೀಡಿದರನಲಮುಖದಲಿ ಮಂತ್ರಕೋವಿದರು ೩೭

ಅರಸಕೇಳಾರಾಜಸೂಯಾ
ಧ್ವರದ ವಿನಿಯೋಗವನು ಪಾಂಡವ
ಧರಣಿಪಾಲರು ಮಾಳ್ಪ ಪರಿಪರಿಯಾವಿಧಾನವನು
ವರ ವಿಭೂಷಣ ಗಂಧ ದಿವ್ಯಾಂ
ಬರವನೀವಧಿಕಾರ ದ್ರುಪದನ
ದುರುಮಹಾಸನದೊಡೆತನವದಾ ಭೀಮಸೇನನದು ೩೮

ಕನಕ ಗೃಹದಧ್ಯಕ್ಷ ದುರ್ಯೋ
ಧನಗೆ ಸಭ್ಯರಪೂಜೆ ಸಹದೇ
ವನದು ಬಹಳದ್ರವ್ಯಸಾಧನಕರ್ಮ ನಕುಲನದು
ಮುನಿವರರ ಶುಶ್ರೂಷೆಯಿರವ
ರ್ಜುನಗೆ ವಿಪ್ರವರಾಂಘ್ರಿಯವನೇ
ಜನದ ಕೆಲಸಕೆ ಕೃಷ್ಣನಾದನು ಭೂಪಕೇಳೆಂದ ೩೯

ಆ ವಿಬುಧ ವರಮುನಿಸದಸ್ಯ ಜ
ನಾವಳಿಯನುಚಿತೋಕ್ತಿಯಲಿ ಸಂ
ಭಾವಿಸಿದನುರು ಕನಕ ವಸನಾಭರಣ ನಿಕರದಲಿ
ಭೂವರನ ಬಹಳಾಧ್ವರಾಂಗಕೆ
ಜೀವಭೂತನು ಕೃಷ್ಣನೆನಲಿ
ನ್ನಾವುದರಿದೆನುತಿರ್ದುದಖಿಳಾಮರ ಮುನಿಸ್ತೋಮ ೪೦

ಆ ಮಹಾಸಭೆಯೊಳಗೆ ಪಾಂಡವ
ಭೂಮಿಪತಿ ಕೊಡಲಗ್ರಪೂಜೆಯ
ನಾಮಹಾವರಮುನಿ ನೃಪಾಲರೊಳಾರು ಯೋಗ್ಯರೆನೆ
ಶ್ರೀಮನೋರಮ ಕೃಷ್ಣನಮರ
ಸ್ತೋಮವಂದಿತನಿರಲು ಭುವನ
ಸ್ತೋಮದಲಿ ಬೇಱಾರೆನುತ ಸಾಱಿದನು ಸಹದೇವ ೪೧

ಅಹುದಲೈ ಸಹದೇವ ಯೆನುತಾ
ಬಹಳ ಸುರವರ ನೃಪನಿವಹ ಸ
ನ್ನಿಹಿತ ಬಹಳಾಸ್ಥಾನಜನಕೊಂಡಾಡಿದರು ಬಿಡದೆ
ವಿಹಿತ ಸತ್ಕಾರದಲಿ ಕೃಷ್ಣನ
ಮಹಿತ ಚರಣವ ತೊಳೆದು ಪಾಂಡವ
ಮಹಿಪನಿತ್ತನು ಪೂಜೆಯನು ನಿತ್ಯಾತ್ಮನಂಘ್ರಿಯಲಿ ೪೨

ಭದ್ರಮುಖ ವಿಭವದಲಿ ಭುವನ ಚ
ತುರ್ದಶದ ಜನ ದಣಿದುದೊಲಿದು ಜ
ನಾರ್ದನಗೆ ಕೊಡಲಗ್ರಪೂಜೆಯನದನುಕಾಣುತ್ತ
ಎದ್ದನಾ ಶಿಶುಪಾಲನೇಱಿದ
ಗದ್ದುಗೆಯನೊಡೆಹೊಯ್ದು ಮೀಸೆಯ
ತಿದ್ದಿ ನಿಂದನು ನುಡಿದನಾ ಸಭೆಯೊಳಗೆ ಕೈನಗಹಿ ೪೩

ಕೇಳಿದಿರೆ ನೆರೆದಖಿಳ ಪೃಥ್ವೀ
ಪಾಲರೀ ಸಹದೇವನಾಡಿದ
ಬಾಲಭಾಷಿತವನು ಯುಧಿಷ್ಠಿರನೃಪನ ದುಷ್ಕೃತವ
ಆಲಿಸಿದಿರೈ ವರಮುಖಕೆ ಗೋ
ಪಾಲನಾದನು ಪೂಜ್ಯನಿದಕನು
ಕೂಲರಾದಿರಿ ನೀವೆನುತ ನಿಂದಿಸಿದನಾ ಚೈದ್ಯ ೪೪

ಈ ಋಷಿಗಳೀ ವಿಪ್ರವರರೀ
ಭೂರಮಣರೀ ಸಕಲ ವಿದ್ಯಾ
ಪಾರದರ್ಶಿಗಳೀ ಸಮಾಗತ ಲೋಕಪಾಲಕರು
ಸಾರತರ ಸಂಯಮ ತಪೋವ್ರತ
ಧಾರಿಗಳು ನೆರೆದಿರಲು ಗೋಪೀ
ಜಾರನಲಿ ವಂದ್ಯಾಭಿಮಾನವೆ ಶಿವಶಿವಾಯೆಂದ ೪೫

ಹೀನಕುಲಸಂಜಾತನಾಶ್ರಮ
ಹೀನನಮಳಕ್ಷತ್ರಧರ್ಮವಿ
ಹೀನನಿಹಪರಲೋಕಗತಿಮತಿಹೀನ ಗುಣಹೀನ
ಹೀನನಾಚಾರದಲಿ ಸುಕೃತ ವಿ
ಹೀನನುರುತರ ಬಾಹುಸತ್ವ ವಿ
ಹೀನಗೇನೆಂದಿತ್ತಿರಗ್ರಾರ್ಪಣವನಕಟೆಂದ ೪೬

ಎನುತಿರಲು ಶಿವಶಿವಯೆನುತ ಚೈ
ದ್ಯನನು ಬೈವುತ ನೆರೆದ ಸುರಮುನಿ
ಜನವಿರಲು ಮೋನದಲಿ ಕೈಯಲಿ ಮುಚ್ಚಿಕಿವಿಗಳನು
ತನತನಗೆ ಗುಜಗುಜಿಸಿ ಸಭೆಯಲಿ
ಕನಲಿದಾ ಸಹದೇವನೆದ್ದನು
ದನುಜಹರನಾಕ್ಷೇಪವನು ಕೇಳುತ್ತ ಕಡುಮುಳಿದು ೪೭

ಏನೆಲವೋದುಷ್ಟ ಗರ್ವಿತ
ಶ್ವಾನ ಬಗುಳುವೆ ಕೃಷ್ಣನತುಳ ಮ
ಹಾನುಭಾವನಱಿವಡಾರೊಳಗಾರು ನೀನಿದಕೆ
ಜ್ಞಾನ ಸಂಯಮ ವರತಪೋನು
ಷ್ಠಾನವಂತರಿಗರಿದು ಮಾಯಾ
ಮಾನಿನಿಯ ಮೈಬಳಿಯ ಮತಿಗಿದು ಗಮ್ಯವೆಂತೆಂದ ೪೮

ಒಲಿದುನೋಡಿದಡಬುಜಜಾಂಡಾ
ವಳಿಗಳುದಿಸುವವಾವನಲಿ ಮುಗು
ಳಲಸಿದಡೆ ಸಂಹಾರವಾವನ ಹುಬ್ಬಿನಾಟದಲಿ
ಸಲೆಜಗವಶಾಸಿಸುವ ನಿಗಮಾ
ವಳಿಗಳಾರ ಶ್ವಾಸದಿಂದು
ಜ್ವಲಿಸಿದುವು ನೀನಾರು ಕೃಷ್ಣನನಱಿವಡಕಟೆಂದ ೪೯

ಹುರುಡಿಸುವಡೆಲೆ ಹಾಹೆಸಿಂನು
ತ್ತ್ರರವನಱಿಯೆ ವೃಥಾಭಿಯೋಗ
ಜ್ವರಗೃಹೀತನಲಾ ವಿವೇಕದಮಾತು ನಿನಗೇಕೆ
ಬೆರಟೆ ಜಗವನು ಕೊಲುವ ಕಾವನ
ಚರಣರಜದಲಿ ನಿರ್ಮಿಸುವ ಮುರ
ಹರನನಾರೆಂದೆಲವೊ ಬಗುಳುವೆ ಪಾಪಿಸೀನೆಂದ ೫೦

ಅಱಿವರೇ ಮುನಿವರರು ಸುರವರ
ರಱಿಯರೀ ಕಮಲಜಭವಾದಿಗ
ಳಱಿಯರೀ ರಾಜರ್ಷಿ ದೇವಋಷಿ ಪ್ರವರರಿವರು
ಅಱಿತೆ ನೀನೀ ಕೃಷ್ಣನಲಿ ಜಗ
ದುಱುವದೈವದಲಕಟ ಭಾರಿಯ
ಕೊರತೆಯನು ಶಿಶುಪಾಲ ನೀ ಸರ್ವಜ್ಞನಹೆಯೆಂದ ೫೧

ಕೇಳುತಿದ್ದುದು ಸಕಲ ಯಾದವ
ಜಾಲವಾ ಪಾಂಡವರು ಪರಭೂ
ಪಾಲತತಿ ಹಲ್ಲಣಿಸಿದುವು ಹಯರಥಗಜವ್ರಾತ
ಸೀಳು ಶಿಶುಪಾಲಕನ ಬಗುಳುವ
ನಾಲಗೆಯನಕಟಕಟ ನಿಂದೆಯ
ಕೇಳುವರೆ ಹರಹರ ಮಹಾಪಾತಕವನಿದನೆಂದು ೫೨

ಬಗುಳುವುದು ಮತ್ಸರದನಾಯದು
ಬಗುಳುವುದೆ ಕಲಿಸಿಂಗ ಕರುಣಾ
ಳುಗಳ ದೇವನು ಕೇಳುತಿದ್ದನು ಖಳದುರುಕ್ತಿಗಳ
ಬಗೆವನೇ ಸರ್ವಾತ್ಮಕನು ವೈ
ದಿಗೆಯದಾತ್ಮಾರಾಮ ಪರಯೋ
ಗಿಗಳ ಕುಲದಧಿದೈವವಿದ್ದನು ಬಿಗಿದಮೋನದಲಿ ೫೩

ಕೆರಳಿದರು ಪಾಂಡವರು ಸೃಂಜಯ
ರುವಣಿಸಿದರು ಯಾದವರಬಲ
ವಿರದೆ ಮೋಹರಿಸಿದುದು ಕೇಕಯ ಭೂಮಿಪಾಲಕರು
ಬರನೆಳೆದರಾಯುಧವ ಘನನಾ
ಗರದವೊಲು ಗರ್ಜಿಸುವ ಸುಭಟರ
ಕರಿತುರಗ ನಿಕರದಲಿ ಸಂಕುಲವಾಯ್ತು ನಿಮಿಷದಲಿ ೫೪

ಇರಲು ಕಾಣುತ ಪರಬಲದ ಮೋ
ಹರದ ಸನ್ನಾಹವನು ತಾ ಸಂ
ಗರಕೆ ಕೊಂಡನು ಹರಿಗೆ ಕಡಿತಲೆಗಳನು ಶಿಶುಪಾಲ
ಉರುಳೆಗಡಿದನು ವೈನತೇಯನ
ಧುರಕೆ ಕಮ್ರಕುಮಾರಕರು ಮೋ
ಹರಿಸಿತೇ ತಪ್ಪೇನೆನುತ ಕೆಲಬಲವನೀಕ್ಷಿಸುತ ೫೫

ಏಳಲೆದ್ದರು ಚೈದ್ಯನೊಡನೆ ನೃ
ಪಾಲಕರು ಕೆಲರೊಂದೆನೆಗೆ ಭೂ
ಪಾಲಕರು ಕೆಲರಿದ್ದರು ಭವವಿರೋಧ ಭೀತಿಯಲಿ
ಕಾಳಗದ ಕಲಿಮನದ ಸುಭಟರ
ಜಾಲವನು ನಿಲಿಸುತ್ತ ಲಕ್ಷ್ಮೀ
ಲೋಲನೆದ್ದನು ತುಡುಕಿ ತೀವ್ರಮಹಾಸುದರ್ಶನವ ೫೬

ಸಿಡಿಲವೋಲುರವಣಿಪ ಖಳನನು
ಕಡೆಯೆನುತ ಮುರವೈರಿ ಚಕ್ರದ
ಲಿಡಲು ಬಿದ್ದುದು ತಲೆ ಧರಿತ್ರಿಗೆ ಸುರರುಘೇಯೆನಲು
ಎಡಬಲದ ಧರಣೀಶ್ವರರು ವೊ
ಗ್ಗೊಡೆದು ಜೀವವಿನಾಶ ಭಯದಲಿ
ವೊಡಗೂಡೆ ಬಳಿಕಾತನಾತ್ಮಜ್ಯೋತಿ ಕೃಷ್ಣನಲಿ ೫೭

ಅಂಜದಿರಿ ನೃಪರೆನುತಭಯ ಕರ
ಕಂಜವನು ನೆಗಹಿದನು ನತಪವಿ
ಪಂಜರನು ಮುರವೈರಿ ಸಂತವಿಸಿದನು ಪರಿಜನವ
ರಂಜಿಸಿದುದಾಸ್ಥಾನ ಭೀತಿಯ
ಮಂಜು ಹರೆದುದು ಮತ್ತೆ ಭೂಪರ
ಪುಂಜವೆಸೆದುದು ವಿಪ್ರ ಋಷಿ ದೇವರ್ಷಿ ಜನಸಹಿತ ೫೮

ಸಭೆಯ ಪೂಜಿಸಿದನು ಮಹೀಪತಿ
ವಿಭವದಲಿ ಸಂತುಷ್ಟಿ ಪಡೆದುದು
ತ್ರಿಭುವನದಜನವವನಿವನ ಸನ್ಮಾನದಾನದಲಿ
ಪ್ರಭುತನವನೇನೆಂಬೆನಾ ಕೌ
ಸ್ತುಭಧರನ ದಾಸರಿಗೆ ಸಲೆ ದು
ರ್ಲಭವದಾವುದು ಚಿತ್ರವಾಯ್ತುಧ್ವರ ಮಹಾವಿಭವ ೫೯

೧೪

# ಪಾರ್ಥಸಾರಥಿ

ಅರಸಕೇಳುತ್ತರಿಸಿ ಪಾಂಡವ
ಧರಣಿಪರು ವನವಾಸವನು ನೆರೆ
ದಿರಲುಪಪ್ಲಾವ್ಯದಲಿ ತದ್ಧಾರ್ತಾಮಹೋತ್ಸವವ
ಧುರದಲಾ ಕೌರವನ ಸೇನೆಯ
ನೊರಸಿ ಗೋಗ್ರಹಣದಲಿ ಶೌರ್ಯವ
ಮೆಱೆದ ಸಾಹಸಶಕ್ತಿಯನು ಕೇಳಿದನು ಮುರವೈರಿ ೧

ಏನನೆಂಬೆನು ಕೇಳುತವೆ ಸು
ಮ್ಮಾನತಳಿತುದು ಸಕಲ ಯಾದವ
ಸೇನೆಯಲಿ ಕೃತವರ್ಮ ಸಾತ್ಯಕ್ಯುದ್ಧವಾದಿಗಳು
ಆನುಕೂಲ್ಯದಲಾ ಸುಭದ್ರಾ
ಸೂನುಗದಸಾರಣರು ಸಹಿತಾ
ದಾನವಾಂತಕನೊಸಗೆ ಮಿಗೆ ನಿಜಪುರವ ಹೊಱವಂಟ ೨

ಗಹಗಹಿಪ ಭೇರಿಗಳ ಬಿರುದಿನ
ಕಹಳೆಗಳ ಕಳಕಳದ ವಾದ್ಯದ
ಬಹುಳತೆಯ ಗಜವಾಜಿರಥ ನಿಸ್ವನದ ನಿಷ್ಠುರದ
ರಹಿಮಿಗಲು ರಾಜೀವನಾಭನು
ಬಹಳ ಸಂತೋಷದಲಿ ಪಾಂಡವ
ಮಹಿಪನನು ಕಂಡುಚಿತದಲಿ ಸಂಭಾವಿಸಿದನೊಲಿದು ೩

ಅವನಿಪತಿ ಕೇಳಸುರರಿಪು ಪಾಂ
ಡವರು ಕೌರವರೊಳಗೆ ಸಂಧಾ
ನವನು ಮಾಡಲು ಬಳಿಕ ಬಿಜಯಂಗೈಯಲಾ ಖಳರು
ಹವಣನಱಿಯದೆ ಕೃಷ್ಣನನು ಕೌ
ರವರು ಕಟ್ಟಲು ಬಗೆದರಂತಕ ಭ
ವನವನು ಹೊಗಲರ್ಥಿಯಲಿ ದುರ್ಯೋಧನಾದಿಗಳು ೪

ಕಟ್ಟಬಂದನಿಬರಿಗೆ ದನುಜಘ
ರಟ್ಟನಗಣಿತರೂಪವನು ತತು
ದೃಷ್ಟಿ ಗೋಚರವೆನಲು ತೋಱಿಸಿ ಭೀತಿಯನು ಬಡಿಸಿ
ಕೆಟ್ಟರಕಟಕಟೆನುತ ಪಾಂಡವ
ಸೃಷ್ಟಿಪಾಲರ ಹೊರೆಗೆ ಬಳಿಕಾ
ದುಷ್ಟರೆಂದುದನೆಂದನಸುರಾರಾತಿ ನಡೆತಂದು ೫

ನೆರೆದುದಗಣಿತ ರಾಯದಳ ವಿ
ಬ್ಬರಿಗೆ ಯೇಳಕ್ಷೋಹಿಣೀ ಬಲ
ವೆರಸಿ ದ್ರುಪದವಿರಾಟ ಮುಖ್ಯಸಹಾಯ ಭೂಪರಲಿ
ಧರಣಿಪತಿ ಧರ್ಮಜನು ತಮ್ಮಂ
ದಿರು ಸಹಿತ ಮುಂದಿಟ್ಟುಕೊಂಡಂ
ಬರುಹನಾಭನನಾಹವಕೆ ವಿಶಸನಕೆ ನಡೆತಂದ ೬

ಆ ಕುರುಕ್ಷೇತ್ರದಲಿ ನೆರೆದುದ
ನೇಕ ದೇಶಾಧೀಶ್ವರರು ಕುಂ
ತೀ ಕುಮಾರರ ಕೌರವರ ಸಂಗರಕೆ ನೆರವಾಗಿ
ತೇಕಿದವು ದಿಗಿಭಂಗಳವನಿಗೆ
ನೂಕಿದವು ಕಡಲೇಳು ದೆಸೆಗಳ
ನೌಕಿದವು ಕೆಂದೂಳಿ ಚಾತುರ್ಬಲಪ ಪದಹತಿಗೆ ೭

ಕ್ಷಿತಿಪಕೇಳುಭಯದಲಿ ಸೇನಾ
ಪತಿ ಸುಧೃಷ್ಟದ್ಯುಮ್ನ ಗಂಗಾ
ಸುತರೆನಲು ಸನ್ನದ್ಧವಾಯ್ತಾವ್ಯೂಹವೆಡಬಲಿ
ಧೃತಕವಚ ಕಾರ್ಮುಕ ಶರೌಘೋ
ದ್ಧತನೆನಿಸಿ ಕಲಿಪಾರ್ಥನಮಳಾ
ಚ್ಯುತನ ಪದದಲಿ ನಮಿಸಿನಿಂದನು ವರರಥಾಗ್ರದಲಿ ೮

ಪಿತೃ ಸುತ ಪ್ರಿಯಬಂಧು ಗುರು ಸಂ
ತತಿ ಸಹೋದರ ವರ್ಗವನು ಕಾ
ಣುತ ಕರಾಗ್ರದ ಧನುವನೊಯ್ಯನೆನಿಲಿಸಿ ರಥದೊಳಗೆ
ಮತಿಮುರಿದು ಕಲಿಪಾರ್ಥ ನರಕ
ಸ್ಥಿತಿಯಹುದು ತನಗೆನುತ ಶೋಕಾ
ಸ್ಥಿತನೆನಿಸಲಾತನನು ಮುರಹರನೊಲಿದು ಬೋಧಿಸಿದ ೯

ತಿಳಿಯಲಿರದಾತ್ಮ ಸ್ವರೂಪವ
ನೊಲಿದು ತೋಱಿಸಿ ಶೋಕಮೋಹವ
ಕಳೆದು ಕಾರುಣ್ಯದಲಿ ತತ್ವವಧೋಪದೇಶವನು
ತಿಳುಹಿದನು ಬಳಿಕಿಂದ್ರನಂದನ
ನಲಘು ಸಮರೋದ್ಯೋಗ ಮುಖದಲಿ
ಮೊಳಗಿಸುತ ಗಾಂಡಿವವಕೊಂಡನು ಸೆಳೆದುಮಾರ್ಗಣವ ೧೦

ಎಱಡುಬಲ ಹಳಚುವುದನಾ ಹಲ
ಧರನು ಕಾಣುತ ತೀರ್ಥಯಾತ್ರೆಗೆ
ತೆರಳಿದನು ನೆಱೆನೋಡಲಾಱದೆ ಬಾಂಧವರ ವಧೆಯ
ಧುರಕೆ ನಿಂದನು ಭೀಷ್ಮನವನಿಯ
ಕೊರಳಭಾರವನಿಳುಹಿ ದಿನಹ
ತ್ತಱಲಿ ಹಾಸಿನಮೇಲೆ ಪವಡಿಸಿದನು ಶರಾವಳಿಯ ೧೧

ದಳಪತಿಯಮಾಡಿದನು ಕುರುಪತಿ
ಬಳಿಕ ಭಾರದ್ವಾಜನನು ಕೊಳು
ಗುಳದ ಕೋಳಾಹಳವನದನೇನೆಂಬೆನದ್ಭುತವ
ಅಳಿದನದಱೊಳು ನಿನ್ನ ಪಿತನತಿ
ಬಲನೆನಿಸುವಭಿಮನ್ಯು ಫಲುಗುಣ
ಗಳಲುಮಿಗಲಧಿಕಪ್ರತಿಜ್ಞೆಯ ಮಾಡಿದನು ಮುನಿದು ೧೨

ನಾಳೆಕೊಲುವೆನು ಸಾವೆನಲ್ಲದ
ಡೇಳಿದಿಟವೇ ತನ್ನ ಬಸುಱಲಿ
ಬಾಳನುಡಿದ ಜಯದ್ರಥನನೆಂಬೊಂದು ಭಾಷೆಯನು
ಕೇಳುತಸುರಾರಾತಿ ನುಡಿಯನು
ಪಾಲಿಸಲು ಕಾಣಿಸಿದನಿರುಳಾ
ಶೂಲಪಾಣಿಯನಱುಹಿಸಿದನಸ್ತ್ರದನಕೀಲಕವ ೧೩

ಬಳಿಕ ಮಱುದಿನ ಸಕಲ ಸುಭಟ
ಪ್ರಳಯವಾದುದು ಸಮರ ಕುರುಬಲ
ವಳಿದುದದಱೊಳಗೇನನೆಂಬೆನು ಪಾರ್ಥನುರವಣೆಯ
ಬಲುಭುಜರು ಮಗ್ಗಿದರು ಪಾರ್ಥಾ
ನಳನ ಬಾಣಜ್ವಾಲೆಯಲಿ ನೃಪ
ಕುಲ ಕುಮಾರರು ಸೂಱೆಗೊಂಡರು ಸುರವಧೂಜನವ ೧೪

ಬಾಣಧಾರೆಯಲಱಿದನಹಿತ
ಕ್ಷೋಣಿಪಾಲನ ಶಿರವನಮರ
ಶ್ರೇಣಿಯುಘೆಯೆನಲಸ್ತಮಯಸಮಯದಲಿ ಭಾಸ್ಕರನ
ದ್ರೋಣನೈದುದಿನಕ್ಕೆ ವಿಗತ
ಪ್ರಾಣನಾದನು ಬಳಿಕ ಸಮರ
ಕ್ಷೋಣಿಗಧಿಪತಿಯಾಗಿ ನಿಂದನು ಕರ್ಣನುರವಣಿಸಿ ೧೫

ಎಱಡನೆಯ ದಿವಸದಲಿ ಕರ್ಣನ
ಹಱುವ ಕಂಡನು ಪಾರ್ಥ ಶಲ್ಯನ
ಶಿರಕೆ ತೊಟ್ಟನು ಧರ್ಮನಂದನನರ್ಧದಿವಸದಲಿ
ಕುರುನೃಪಾಲ ವೃಕೋದರರ ದು
ರ್ಧರ ಗದಾಘಾತದಲಿ ಹಿಂಗಿದು
ದರೆದಿವಸವವಗಡಿಸಿ ಬಿದ್ದನು ಕೌರವನುಧರೆಗೆ ೧೬

ಉಳಿದರವಱಲಿ ಮೂವರೇ ಗುರು
ಕುಲಜ ಕೃಪಕೃತವರ್ಮರೆಂಬವ
ರುಳಿದರಿವಱಲಿ ಪಾಂಡವರು ಸಾತ್ಯಕಿ ಯುಯುತ್ಸುಗಳು
ನಿಲಿಸಿ ಧರ್ಮಜನನು ಮಹಾನೃಪ
ಕುಲದ ಪೀಳಿಗೆಯಾಸನದೆ ಕೈ
ಗೊಳಿಸಿದನು ರಾಜ್ಯವನು ಸಂತವಿಸಿದನು ಬಾಂಧವರ ೧೭

ಬಳಿಕ ಕಳುಹಿಸಿಕೊಂಡು ಕರುಣಾ
ಜಲಧಿ ಪಾಂಡುಕುಮಾರರನು ಕಂ
ಗಳಲೊಗುವ ಕಾಂತೆಯರ ನಯನಜಲಂಗಳನು ತೊಡೆದು
ನಿಲಿಸಿ ನಿಗಮ ಸಹಸ್ರಗೀತಾ
ಮಳಚರಿತ್ರನು ಬಂದನುತ್ಸವ
ದೊಳಗೆ ಮೊಳಗುವ ವಾದ್ಯರವದಲಿ ದ್ವಾರಕಾಪುರಕೆ ೧೮

## ೧೫

## ಕುಚೇಲನ ಭಾಗ್ಯ

ಆಸಬಿಡಗಿದುದಂತರಂಗದ
ಬೇಸಬಿಪಗತವಾಯ್ತು ಕೃಷ್ಣಕ
ಥಾಸುಧಾಸಾಗರ ಸಮಗ್ರಜಲಾವಗಾಹದಲಿ
ದಾಸನಾನೆಲೆ ಮುನಿಪ ನಿಮ್ಮಡಿ
ವಾಸುದೇವನ ದಿವ್ಯ ಗುಣ ಪೀ
ಯೂಷಪಾನಾಂತರದ ಲೋಭಿಗೆ ಕರುಣಿಸುವುದೆಂದ ೧

ಆದಡವಧರಿಸರಸ ಪಾವನ
ವಾದ ಕಥೆಯನು ಧರೆಯಲಚ್ಯುತ
ಪಾದಕಮಲಪರಾಗಭಕ್ತನು ಪರಮಸುಖಿಯೆನಿಸಿ
ಮೇದಿನೀಸುರನೊಬ್ಬನೆಸೆದನು
ವೇದವಿತ್ತಮನಾತ್ಮ ವಿದ್ಯಾ
ಸಾಧಿತೇಂದ್ರಿಯವೃತ್ತಿ ವಿಭ್ರಮನಖಿಳ ಗುಣನಿಳಯ ೨

ಜಜಿಸಿದು ದೇಹಪ್ರಾಣಕರಣೋ
ತ್ತರದ ಧರ್ಮವನಾತ್ಮ ವಿದ್ಯಾ
ಪರಿಣತಿಯನಭಿಭವಿಸಿದನು ತೃಷ್ಣಾಮನೋವ್ಯಥೆಯ
ದೊರಕಿದುದನೇ ಕೊಂಡು ಪರಮೇ
ಶ್ವರನ ಮೇಲೆ ಸಮಸ್ತ ಭಾರವ
ನಿರಿಸಿ ರಂಜಿಸುತಿರ್ದನಸೆವ ಗೃಹಸ್ಥಧರ್ಮದಲಿ ೩

ವನಿತೆಯೊಬ್ಬಳವಂಗೆ ನಿಷ್ಕಿಂ
ಚನಗೆ ಪಾತಿವ್ರತ್ಯ ವರಗುಣ
ವನಧಿ ಜೀರ್ಣಾಂಬರೆ ಕೃಶಾಂಗಿ ಸುಶೀಲೆ ಶುಭಚರಿತೆ
ಘನತರಕ್ಷುತ್ ಕ್ಷಾಮೆ ತೃಷ್ಣಾ
ಜನಿತ ಮತಪೃಥುಗಾತ್ರೆಯೆಂಬಳು
ಮನದ ಸಂಕಲ್ಪದಲಿ ಮಾನಿನಿ ತನ್ನ ಪತಿಯೊಡನೆ ೪

ಏತಕಿದು ನಮಗೀ ದರಿದ್ರತೆ
ಭೂತಳದಲಖಿಲಾತ್ಮಕನು ಸಾ
ಕ್ಷಾತ ಲಕ್ಷ್ಮೀಕಾಂತನೇ ಕೃಷ್ಣಾಭಿಧಾನದಲಿ
ಜಾತನಾಗಿರಲಖಿಳಭುವನ
ಖ್ಯಾತವಿದುತಾ ನಿನಗೆ ಸಖ ಕಂ
ಡಾತನನು ಬೇಡುವುದು ಹೋಗೆಂದಳು ಸರೋಜಮುಖಿ ೫

ಮಜಿಸಿದು ಮೇಣಜಿಸಿದೊಮ್ಮೆ ನೆನೆದಡೆ
ನರರಿಗೀವನು ತನ್ನನಕಟಾ
ಕರುಣಿಸನೆ ನಮಗಿಂದು ಧನವನು ಧನವಿಹೀನರಿಗೆ
ದುರಿತಭಯ ಭಗ್ನರಿಗೆ ದುಃಖಾ
ತುರರಿಗಬಲರಿಗಶರಣರಿಗಾ
ರ್ತರಿಗೆ ಪರಮಸ್ವಾಮಿಯಲ್ಲಾಯೆಂದಳಬುಜಾಕ್ಷಿ ೬

ಎಂದು ಪತಿಯನು ದಿನದಿನದಲಾ
ಇಂದುಮುಖಿ ಕಡುಹಸಿವುತೃಷೆಯಲಿ
ಬೆಂದುಮಾಣದೆ ಕಾಡಿಯುಂಡಲೆವುತ್ತಲಿರಲದನು
ಮಂದಹಾಸದಲಾದ್ವಿಜೋತ್ತಮ
ನಂದು ತನ್ನಯ ಮನದೊಳಗೆ ನಾ
ನಂದದಲಿ ಕೇಳುತ್ತ ನಿಶ್ಚಯಿಸಿದನು ಗಮನವನು ೭

ಪರಮಪುರುಷನ ಚರಣಕಮಲದ
ದರುಶನವೆ ದೊರೆಕೊಂಡಡೇನರಿದು
ಪರಮಲಾಭವಲಾ ಧನಾಗಮವಾಗಲದು ಮೇಣು
ನಿರುತವಾಗದೆಮಾಣಲೆನುತಾ
ಪರಮ ಭಾಗವತೋತ್ತಮನು ಪಂ
ಕರುಹಮುಖಿಯೇನುಂಟು ಬಾಯಿನವೆಂದು ಬೆಸಗೊಂಡ ೮

ಎನಲು ಕಾಣದೆ ಬಾಯಿನವನಾ
ವನಿತೆ ತಿರಿದಳು ಧಾನ್ಯವನು ನೆರೆ
ಮನೆಗಳಲಿ ನಾಲುಕು ಮುಷ್ಟಿಯ ಪೃಥುಕ ತಂಡುಲವ
ವನಜಮುಖಿ ಬಳಿಕುರುಮಲೀಮಸ
ವೆನಿಸುವಾವಸ್ತ್ರದಲಿ ಕಟ್ಟಿದ
ಳನುವಮಂಗಿತ್ತಳು ಮುಕುಂದನ ಚರಣದರುಶನಕೆ ೯

ಬಂದನಾದ್ವಾರಾವತಿಗೆ ಗೋ
ವಿಂದನಂಘ್ರಿಸರೋಜಯುಗ ಮಕ
ರಂದಮಗ್ನ ಮನೋವಿಳಾಸ ವಿಚಿತ್ರಗತಿಗಳಲಿ
ಸಂದ ಮಾರ್ಗವನಾಪರಿಶ್ರಮ
ದಂದವನು ನೆಱೆಮಱೆದು ಪರಮಾ
ನಂದರಸ ಪುಳಕದಲಿ ಪರವಶನಾಗುತಡಿಗಡಿಗೆ ೧೦

ಕಂಡನಾಸಾಗರದ ಸಲಿಲೋ
ದ್ದಂಡ ವೀಚೀ ಭುಜಲತಾ ಪರಿ
ಮಂಡಲ ಪ್ರಾಕಾರ ಮೂಲಸ್ಫಟಿಕ ಕುಟ್ಟಿಮದ
ಗಂಡು ರತುನದ ಗಜಗಲಿ ಪರವಿ
ಮಂಡಲವ ಮಸುಳಿಸುವ ಭುವನೋ
ದ್ದಂಡ ದೈವದ ಪುರವಿಭವವನು ಬರುತ ದೂರದಲಿ ೧೧

ಹೊಳೆಹೊಳೆವ ಹೊಂಗಳಸ ನಿಕರದ
ನಿಳಯ ನಿಳಯಂಗಳನು ಕಾಣುತ
ಮುಳುಗಿದುವು ಸಂತೋಷಜಲದಲಿ ಕಂಗಳಡಿಗಡಿಗೆ
ಇಳೆಗೆ ವ್ಯೆಯಿಕ್ಕುತ್ತ ಭಾಳೋ
ಜ್ವಳಕರಾಂಜುಳಿಯಿಂದ ಸೇತುವ
ಕಳೆದು ಸುರಪೂಜಿತನ ಪುರವರಕಾಗಿ ನಡೆತಂದ ೧೨

ಮೂಱು ಹೊತ್ತೋಲಗದ ಸಮಯವ
ಹಾರುವಕ್ಷಿತಿಪಾಲ ನಿಕರ ಕು
ಮಾರ ವರ್ಗದ ಸಕಲ ಸುರನರ ಮಂಡಲೇಶ್ವರರ
ಚಾರಣರ ವಂದಿಗಳ ಗಂಧ
ರ್ವೋರಗರ ಕಿನ್ನರರ ನಿಕರದ
ಭೂರಿಸಂದಣಿಗಳನು ನೆಱೆನೋಡುತ್ತ ನಡೆತಂದ ೧೩

ಸೆಜ್ಜೆಯರಮನೆಯೊಳಗೆ ಧರಣೀ
ನಿರ್ಜರನು ನಡೆತರಲು ಕಾಣುತ
ಸಜ್ಜನ ಪ್ರಿಯಬಾಂಧವನು ಸಿರಿಮಂಚದಿಂದಿಳಿದು
ಅಬ್ಜವದನೆಯ ಕರತಳದ ಚರ
ಣಾಬ್ಜವನು ತೆಗೆದವನಿತಳದಲಿ
ಹಜ್ಜೆಯಿಡುತತಿದೂರದಿಂದೈತಂದನಿದಿರಾಗಿ ೧೪

ಹಿಂಗದಾತ್ಮ ಪ್ರಿಯನಖಿಯನಾ
ಲಿಂಗಿಸಿದನಾ ದ್ವಿಜನನೆರಡು ಭು
ಜಂಗಳಲಿ ಪರಮಾತ್ಮನಧಿಕಪ್ರೇಮಭಾರದಲಿ
ಹೊಂಗಿದನು ಹರಹರ ಮಹಾತ್ಮನ
ಸಂಗಸುಖದಲಿ ತೀವಿದವು ನಿಡು
ಗಂಗಳಲಿ ಹರುಷಾಂಬು ಬಿಂದುಗಳೋರಣದಲಿಳಿಯೆ ೧೫

ಕುಳ್ಳಿರಿಸಿ ಮಂಚದಲಿ ನಿಜಕರ
ಪಲ್ಲವದಲಾ ದ್ವಿಜವರನ ಪದ
ಪಲ್ಲವವನೊಪ್ಪಿರಲು ತೊಳೆದು ತದಂಘ್ರಿತೀರ್ಥದಲಿ
ನಿಲ್ಲದೋಲಾಡಿದನು ಲಕ್ಷ್ಮೀ
ವಲ್ಲಭನು ಮಱೆಯೇಕೆ ನಿಜವನು
ಬಲ್ಲವರು ಬೆಱಗಾಗಲರ್ಚಿಸಿದನುತದಂಘ್ರಿಗಳ ೧೬

ಇತ್ತನಾತಿಥ್ಯಕ್ರಿಯೆಗೆ ಸುಚ
ರಿತ್ರನೊಂದಾಕಳನು ಮಜ್ಜನ
ಕೃತ್ಯವನು ಮಾಡಿಸಿ ಮಲೀಮಸ ವಸ್ತ್ರವನು ಕಳೆದು
ಉತ್ತಮವನುಡಿಸಿದನು ತೊಡಿಸಿದ
ನತ್ಯಧಿಕ ಸಂಪ್ರೀತಿಯಲಿ ಪುರು
ಷೋತ್ತಮನು ಪರಿಪರಿಯ ತೊಡಿಗೆಗಳನು ತದಂಗದಲಿ ೧೭

ಕ್ಷಾಮಕಾಯನನಧಿಕ ಧರ್ಮ
ಸ್ತೋಮಸಂವೃತಗಾತ್ರನನು ಸು
ಕ್ಷೇಮವಾರ್ತೆಗಳಿಂದ ಮನ್ನಿಸುತಿರಲು ದೇವಿಯರು
ಚಾಮರ ವ್ಯಜನಂಗಳಿಂದಾ
ಭೂಮಿಸುರನನು ಭಜಿಸಿದನು ನಿ
ಸ್ಸೀಮ ಗುಣನಿಧಿಯೊಲವದೆಂತುಮೊ ಭೃತ್ಯವರ್ಗದಲಿ ೧೮

ಆವ ಸುಕೃತವ ಮಾಡಿದನೊ ಮೇ
ಣಾವತಪವನು ಚರಿಸಿದನೊ ವಿ
ಪ್ರಾವಧೂತನು ಭಿಕ್ಷುಕನು ಬಡವನು ನಿಗರ್ವಿತನು
ಶ್ರೀವಧೂವಕ್ಷಃಸ್ಥಳನು ತಾ
ನಾವನನು ತೆಗೆದಪ್ಪಿ ನಲಿ ಸಂ
ಭಾವಿಸಿದನೆನೆ ಧನ್ಯನೀ ದ್ವಿಜನೆಂದುದಖಿಳಜನ ೧೯

ಅರಸಕೇಳಸುರಾರಿ ಮಿಗೆ ಸತು
ಕರಿಸಿ ಸಹಜ ಪ್ರೇಮದಲಿ ಭೂ
ಸುರವರನ ಕೈವಿಡಿದು ಸಿರಿಮಂಚದಲಿ ಕುಳ್ಳಿರ್ದು
ಪರಮಕುಶಲಕ್ಷೇಮ ವಾರ್ತೆಯ
ನಿರದೆ ಬೆಸಗೊಳುತಧಿಕ ಹರುಷೋ
ತ್ಕರುಷದಲಿ ಕಾರುಣ್ಯನಿಧಿ ನಗುತೆಂದನೊಲವಿನಲಿ ೨೦

ಎಲೆ ಸಖಿಯೆ ಎಲೆ ಬಾಂಧವನೆ ಗುರು
ಕುಲದಲಂದೊಂದಾಗಿ ಶಿಕ್ಷಿಸಿ
ದಲಘು ವಿದ್ಯಾಭ್ಯಾಸದಲಿ ನಮ್ಮಿಷ್ಟ ಸೌಹೃದವ
ಹೊಲಬನರಿವೈತಂದೆ ದಕ್ಷಿಣೆ
ಗಳನು ಗುರುವಿಂಗಿತ್ತು ಮರಳಿದ
ಬಳಿಕ ನಿನಗಾವಾಶ್ರಮದ ಸಂಬಂಧವಾಯ್ತೆಂದ ೨೧

ಮದುವೆಯಾದೈ ತಂದೆ ಗಾರ್ಹ
ಸ್ಥ್ಯದಲಿ ನಿಂದೈ ಭಾರ್ಯೆಯನುಕೂ
ಲದಲಿ ನಡೆವಳೆ ಮಕ್ಕಳಾದವೆ ಸುಖವೆ ನಿನಗೈದೆ
ಹದನ ಹೇಳಲ್ಲದಡೆ ವೈರಾ
ಗ್ಯದಲಿ ಮನವಕ್ಕಳಿಸಿ ನಿಃಸ್ಪೃಹ
ಪದಕೆ ಪರಿಣತನಾಗಿನಿಂದೆಯೊ ವಿಪ್ರ ಹೇಳೆಂದ ೨೨

ತಂದೆ ಮಱಿದೈ ವಿಪ್ರವರಗುರು
ಮಂದಿರದ ವಾಸದಲಿ ನಾವಿರ
ಲೊಂದುದಿನ ಗುರುಭಾರ್ಯೆಯಾಜ್ಞೆಯಲಿಂಧನವ ತರಲು
ಸಂದೆವಡವಿಗೆ ಗುರುಪದಾಬ್ಜ
ದ್ವಂದ್ವ ಶುಶ್ರೂಷಕರು ಗುರುಸವ
ವೆಂದು ತತ್ಪತ್ನಿಯನು ಮನ್ನಿಸುತಧಿಕ ಭಕ್ತಿಯಲಿ ೨೩

ಅಡವಿಯಲಿ ನಾವಿರಲು ಬಂದುದು
ಸಿಡಿಲು ಮಳೆಮಿಂಚುಗಳು ಧರೆಯನು
ನಡುಗಿಸುವವೋಲಂಬರವನಾವರಿಸಿ ದೆಸೆದೆಸೆಗೆ
ಇಡಿದ ಮೇಘತಮಿಸ್ರದಲಿ ಕಂ
ಗೆಡಿಸಿ ಕಾನನದೊಳಗೆ ಹೆಮ್ಮರ
ನುಡಿಯೆ ಬೀಸುವ ಗಾಳಿಗಳ ಘನತರದ ರಭಸದಲಿ ೨೪

ಅಸ್ತಮಿಸಿದನು ಸೂರ್ಯನನ್ನೆಗ
ನಿಸ್ತಿಮಿತವಹ ಮೇಘರವ ವಿ
ಧ್ವಸ್ತಧೈರ್ಯರು ಕಂಪಿತಾಂಗರು ವಾತವರುಷದಲಿ
ಹಸ್ತವನು ಹಿಡಿದೊಬ್ಬರೊಬ್ಬರು
ವಾಸ್ತನಯನರು ತೊಳಲಿದೆವಲ್ಲೈ
ವಸ್ತುಭೇದವನೀಕ್ಷಿಸಲು ನೆರೆಯದೆ ವನಾಂತದಲಿ ೨೫

ಬೆಳಗಹನ್ನಕ ಕತ್ತಲೆಯ ಮಳೆ
ಗಳ ಮಹಾವಾತಾಂಬು ಪೂರದ
ಹಳುವದಲಿ ಹೊಲಬಳಿದು ಕೈವಿಡಿದೊಬ್ಬರೊಬ್ಬರನು
ತಿಳಿಯಬಾರದು ರೂಪು ಕಳೆವರ
ದಳತೆಯಲಿ ಮತಿನಿಂದುದಜ್ಞರ
ಬಳಕೆಯಂತಿರಲೇಕದೇಶ ನಿಜಾತ್ಮಭಾವದಲಿ ೨೬

ಇರಲಿರಲು ಬೆಳಗಾಯ್ತು ದುಃಖಾ
ತುರರಿಗೀ ಸಂಸಾರಭಯಸಾ
ಗರನಿಮಗ್ನರಿಗಾತ್ಮ ವಿದ್ಯಾ ಪಾತದಂದಲಿ
ಇರುಳು ಮನದೊಳಗುಮ್ಮಳಿಸುವಾ
ಗುರುವರನು ನಿಜಭಾರ್ಯೆಯನು ಜಱಿ
ದರುಣನುದಯದಲಱಿಸುತಡವಿಗೆ ಬಂದನಾತ್ಮಜರ ೨೭

ಅಱಿಸುತಱಿಸುತ ಘೋರವಿಪಿನಾಂ
ತರದಲಾತನು ತೊಳಲಿ ನಿಜ ಶಿ
ಷ್ಯರನು ಕಾಣದೆ ಬಾಯಬಿಟ್ಟೊಱಲಿದನು ಬಸವಳಿದು
ತರುಣರಿರ ಮಕ್ಕಳಿರ ನಿಜಪದ
ಶರಣರಿರ ತನಗೋಸುಗಳಿದಿರೆ
ಕರಡಿ ಹುಲಿ ಹಂದಿಗಳ ಬಾಯಲಿ ಗಾಳಿಮಳೆಗಳಲಿ ೨೮

ಒಡಲಮೋಹವ ನೋಡದೆಮ್ಮಯ
ನುಡಿಯನೇ ಪಾಲಿಸುತ ಭರದಿಂ
ದಡವಿಪೊಕ್ಕಿರಿ ಸಿಕ್ಕಿದಿರಿ ಬಲು ಗಾಳಿಮಳೆಗಳಲಿ
ಕಡುನಿರೋಧಂಬಟ್ಟು ಸಾಯದೆ
ಪೊಡವಿಯಲಿ ಬದುಕಿದ್ದಿರಾದಡೆ
ಮೃಡನೊಲವು ತನಗಧಿಕತರ ಕೃತಕೃತ್ಯತಾನೆಂದ ೨೯

ಇಲ್ಲ ಶುಶ್ರೂಷೆಯಲಿ ಕೊಱತೆಗ
ಳಿಲ್ಲ ತನ್ನಲಿ ಕರುಣವದು ದಿಟ
ವುಳ್ಳಡಾಯುಷ್ಮಂತರಾಗಿ ಸಮಸ್ತ ವಿದ್ಯೆಗಳ
ಬಲ್ಲವರು ನೀವಾಗಿ ಲಕ್ಷ್ಮೀ
ವಲ್ಲಭನ ಕೃಪೆಯಾಗಲಿಹಪರ
ದಲ್ಲಿ ನೆಱಿಗತಿವಡೆವುದಾನು ಸದೈವನಹಡೆಂದ ೩೦

ಎನುತೆನುತೆ ತೊಳಲಿದನು ಘನ ಕಾ
ನನದಲಱಸುತ ತನ್ಮನಾ ಗುಣ
ವನಧಿ ಕಂಡನು ಬಳಿಕ ವಿಪಿನೋದ್ದೇಶದಲಿ ಬರುತ
ಮನದ ಸಂತೋಷದಲಿ ಸಾಂದೀ
ಪನು ನಿಜಾಶ್ರಮಕೆಯಿದಿ ಬಳಿಕಾ
ವನಿತೆಸಹಿತೋಲಾಡಿದನು ಕಾರುಣ್ಯ ಜಲಧಿಯಲಿ ೩೧

ಭೂಸುರೋತ್ತಮ ಕೇಳು ಗುರು ಶು
ಶ್ರೂಷೆಯಿಂದಲ್ಲದೆ ವಿಮುಕ್ತಿಗೆ
ಲೇಸೆನಿಪ ಮಾರ್ಗವನು ಕಾಣೆನು ಮಿಕ್ಕುಪಾಯವನು
ನೇಸಱಿಂದಲ್ಲದೆ ತಮಿಸ್ರಕೆ
ನಾಶವಹುದೇ ತಂದೆ ತಾರಾ
ರಾಶಿಗಳ ತನಿವೆಳಗಿನಲಿ ಫಲವೇನು ಹೇಳೆಂದ ೩೨

ಎಂದಡಾದ್ವಿಜವರ್ಯನಧಿಕಾ
ನಂದದಲಿ ಕೇಳುತ್ತ ನುಡಿದನು
ಕಂದಣಿಯೆ ಕಮನೀಯ ಮೂರ್ತಿಯ ನೋಡಿ ಕೈ ಮುಗಿದು
ತಂದೆಕೇಳರಿದಾವುದೆನಗಾ
ನಂದನಿಧಿ ನಿನ್ನೊಡನೆ ಗುರುಕುಲ
ಮಂದಿರದ ಸಹವಾಸವಾಯ್ತೆನಗಿಹಪರಂಗಳು ೩೩

ಅಱಿಯದಜ್ಞರಿಗಾತ್ಮತತ್ವವ
ನಱುಹಿಸಲು ನಾನಾಸ್ವರೂಪವ
ಧರಿಸಿ ನಿರ್ಮಳಸತ್ವಗುಣದಲಿ ಮೆಱೆವ ನಿಜಪದವ
ಪರಮ ಪಾವನ ಪುಣ್ಯಗುಣ ಸ
ಚ್ಚರಿತನಾಮನೆ ದೇವ ಕರುಣಾ
ಕರನೆ ಕೃತವಿತ್ತಮನೆ ಶರಣಾಗೆಂದನಾ ವಿಪ್ರ ೩೪

ಕಂಡೆನಲ್ಲೈ ಕೃಷ್ಣ ಮುನಿ ಹೃ
ತ್ಪುಂಡರೀಕ ನಿವಾಸಿಯನು ನೆಱೆ
ಕಂಡನಖಿಳಾಮರರ ಭೂಗೃಹ ಗೂಢಚಿನ್ಮಯನ
ಕಂಡೆನೈ ಕರುಣಾನಿಧಿಯ ಪದ
ಪುಂಡರೀಕವನೆನ್ನವೋಲು
ದ್ದಂಡ ಧನ್ಯರದಾರೆನುತ ತಲೆವಾಗಿದನು ಪದಕೆ ೩೫

ಸಸಿನೆ ಕುಳ್ಳಿರುನಖಿಯೆ ತುಂಬಿತೆ
ಬಸಿಱು ನೀನೆಱಗಿದರೆ ಮಾತಿನ
ಹಸರ ಸಾಕೆನಗೇನನೈ ನೀತಂದೆ ಕಾಣಿಕೆಯ
ಉಸುರುಸುರು ನಾಚದಿರು ಮೇಣದು
ತ್ಸವನೆ ಆಗಲಿ ನೀನದನು ಪಂ
ಚಿಸದೆ ಕೊಡು ಪರಿತುಷ್ಟತಾನಹೆನೆಂದನಸುರಾರಿ ೩೬

ಒಂದು ಫಲವೊಕ್ಕುಡಿತೆಜಲ ಮೇ
ಣೊಂದು ಹೂವೊಂದೆಲೆಗಳೆಂಬಿವ
ನೊಂದು ಮನದೊಳಗೆನ್ನನೇ ಭಾವಿಸುತ ಭಕುತಿಯಲಿ
ತಂದುಕೊಟ್ಟರೆ ಕೊಂಬೆನುಂಬೆನು
ತಂದೆ ಕೇಳೆನ್ನವರ ಪೂಜೆಯ
ಕುಂದು ಹೆಚ್ಚಿನ ದೈವವಾನಲ್ಲೆಂದನಸುರಾರಿ ೩೭

ಹಿಱಿದುಕಿಱಿದೆಂದೆನ್ನದಿರು ಮನ
ವೆಱಸಿ ಕೊಟ್ಟುದು ಮೇರುಸಮ್ಮಿತ
ದೊರಕಿದುದನೆನಗೀವುದದಿದೆಂದೆನ್ನದುಳ್ಳುದನು
ಹಿಱಿದ ಹಾರುವನಲ್ಲ ಕೇಳೆಲೆ
ಪರಮ ಭಕುತನೆ ತಂದೆಯೇನನು
ದರುಶನಕೆ ಕಾಣಿಕೆಯನುಳಿಸದೆ ಹೇಳು ನೀನೆಂದ ೩೮

ಇಂತೆನುತ್ತಿರಲಾದ್ವಿಜೋತ್ತಮ
ನೆಂತುಕೊಡುವೆನು ಕುತ್ಸಿತವನ
ತ್ಯಂತ ತುಚ್ಛವನಱಿಯದೇತಕೆ ತಂದೆ ನಾನಿದನು
ಎಂತು ತಾನಿದನಱಿವನಕಟಕ
ಟಂತರಾತ್ಮಂಗರಿದೆ ಲಕ್ಷ್ಮೀ
ಕಾಂತನಂಘ್ರಿಗೆ ಕಾಣಿಕೆಯಿದಲ್ಲೆನುತ ಚಿಂತಿಸಿದ ೩೯

ಕೊಡುವೆನೆಂಬುದು ಹೋಗಿ ಮಾತನು
ನುಡಿಯುವೇನೈ ತಂದೆ ನೀನೆ
ನ್ನೊಡನೆ ನಾಚಲದೇಕೆ ತಾರೆನು ಕಾಣಿಕೆಯನೆಂದು
ನುಡಿಯಲಾಗದೆ ಹಿಂದೆ ಕಂಕುಳ
ಲಡಸಿಕೊಂಡಿಹುದೇನು ತೋಱಿಸು
ತೊಡನೆ ತಾ ಕೈಗುತ್ತಿಕೊಂಡನು ಪೃಥುಕ ತಂಡುಲವ ೪೦

ಇನಿತಿರಲು ನಾಚುವರೆ ತನಗೀ
ಮನೆಗೆ ಮಕ್ಕಳಿಗುಂಟು ನೀನೆ
ನ್ನನುವನಱಿಯದೆ ಮನವನೇತಕೆ ಬಳಲಿಸಿದೆಯಕಟ
ಎನುತ ತೆಗೆದವಲಕ್ಕಿಯನು ಮುನಿ
ವಿನುತ ಮಹಿಮನು ಮುಷ್ಟಿಯಿಂದಾ
ನನಕೆ ಪೂಜೆಯ ಮಾಡಿಕೊಂಡನು ತಾನೆ ಮನವೊಲಿದು ೪೧

ಒಂದು ಮುಷ್ಟಿಯ ಮೆದ್ದು ಮತ್ತಿ
ನ್ನೊಂದು ಮುಷ್ಟಿಯ ಮೆಲುವೆನೆಂದಾ
ನಂದನಿಧಿ ಬಾಯ್ಗೆತ್ತಲೀಕ್ಷಿಸುತವೆ ಮಹಾಲಕುಮಿ
ಬಂದು ಹಿಡಿದಳು ಕೈಯನೇಕೀ
ಸೊಂದು ಚಾಪಲವಾತ್ಮತುಷ್ಟಂ
ಗೆಂದು ನುಡಿದಳು ನಡುಗಿ ಪರಮೇಶ್ವರನ ಕಾಲ್ವಿಡಿದು ೪೨

ಲೋಕವೆಱಡರ ಸುಖಕೆ ಬಹುಳಾ
ನೇಕ ವಿಭವಂಗಳಿಗೆ ನಿನ್ನೊಂ
ದೇಕ ಮುಷ್ಟಿಗ್ರಾಸವೇಸಾಲದೆ ಮಹೀಸುರಗೆ
ಸಾಕು ಮಾಱದಿರೆನ್ನನತ್ತಲೆ
ನೂಕದಿರು ನಿಜಭಕ್ತರೆಂಬೊಂ
ದಾಕೃತಿಗೆ ಮರುಳಾಗಲೇಕೆನಲೆಂದನಂಗನೆಗೆ ೪೩

ಮರುಳು ಹೆಂಗಸೆ ಬಱಿದೆ ವಿಪ್ರನ
ಸುರಿಯಿಸಿದೆ ದಾರಿದ್ರ್ಯ ದುಃಖದ
ಲಿರವಿಗನೆ ನಿನಗೀತನೆನ್ನಯ ಭಕುತನಕಟಕಟ
ಕರವಬಿಡು ಮಾಱಿದೆನು ಮಾಱಿದೆ
ನ್ನರಸಿಯಲ್ಲೆನಗೆನುತ ಬಹಳಾ
ಮರುಷದಲಿ ಜಱಿದಂತೆ ನುಡಿದನು ಜಗದಧೀಶ್ವರನು ೪೪

ಎನಿತನೆನ್ನಯ ಭಕ್ತರಿಂಗೆಲೆ
ವನಿತೆಲೇಸನು ಮಾಳ್ಪೆಯುನಿತುವ
ನೆನಗೆ ನೀ ಮಾಡಿದುದು ಬೇಱಿನಗಿಲ್ಲ ನೀ ಮಾಳ್ಪ
ಮನದೊಲವು ತನ್ನೊಲವ ಪಡೆವರೆ
ವನಜಮುಖಿ ಬಳಿಕೋತು ನಿಃಸ್ಪೃಹ
ರೆನಿಪ ತನ್ನೇಕಾಂತ ಭಕ್ತರ ಭಜಿಸು ಹೋಗೆಂದ ೪೫

ಉಂಬರಾವದು ತನಗೆ ಪೂಜೆಯ
ಗೊಂಬರಾವದು ತನ್ನ ಮೂರ್ತಿಯ
ಡಿಂಬವದು ನಿಜಜೀವವಿವದಿರು ತತ್ತ್ವಸಂಗದಲಿ
ಅಂಬುಜಾನನೆ ರಮಿಸುವುದು ಮನ
ವಿಂಬುಗೊಂಡವರೊಳಗೆ ನೀನೇ
ನೆಂಬೆ ಹೇಳೆನಲೆಱಗಿ ತಪ್ಪಿದೆನೆಂದಳಬುಧಿಭವೆ ೪೬

ಹಲವುಪರಿಯಲಿ ಬೇಡಿಕೊಳಲಾ
ಲಲನೆಯರ್ಥಿಯ ನಲಿನಲೋಸುಗ
ಮೆಲಲು ತೆಗೆದವಲಕ್ಕಿಯನು ನಗುತಿರಿಸಿದನು ಕೆಲಕೆ
ಒಲಿದು ಭೋಜನ ಪಾನ ಶಯನಂ
ಗಳಲಿ ಮನ್ನಿಸಿದನು ಮಹೀಸುರ
ತಿಲಕನನು ತನಗುಳ್ಳ ಬಹುಳೈಶ್ವರಿಯ ಭೋಗದಲಿ ೪೭

ಒಂದಿರುಳನಸುರಾಂತಕನ ನಿಜ
ಮಂದಿರದಲೇ ನೂಕಿದನು ಮುದ
ದಿಂದ ಸಹಸಲ್ಲಾಪ ಭೋಜನ ವಿವಿಧಗೋಷ್ಠಿಯಲಿ
ಬಂದನುದಯಾಚಲಕೆ ರವಿಯೆನ
ಲಂದು ವಿಪ್ರೋತ್ತಮನು ತನ್ನಯ
ಮಂದಿರಕೆ ಬೀಳ್ಕೊಂಡನಚ್ಯುತನಂಘ್ರಿಯಲಿ ನಮಿಸಿ ೪೮

ಬಿಡಲರಿಯದಚ್ಯುತನ ಪದವನು
ಪೊಡವಿಯಮರನು ಕಾತರಿಸಿ ಕಡ
ಲಿಡುವ ಕಂಗಳ ಜಲದಲೋಲಾಡುತ್ತ ಬೀಳ್ಕೊಂಡು
ನಡೆದನತ್ತಲು ವಿಪ್ರನನು ಕಿರಿ
ಡೆಡೆಯ ಕಳುಹಿ ಕೃಪಾಜಲಧಿ ಜಗ
ದೊಡೆಯ ನಿತ್ಯಾತುಮನು ಮರಳಿದನಾತ್ಮಮಂದಿರಕೆ ೪೯

ಬೀಳುಕೊಂಡೆಲೆಭೂಪ ವಿಪ್ರರ
ವೌಳಿಮಣಿಹೊಱವಂಟು ಮುರಹರ
ನಾಲಯವನೆಯ್ತಂದನೊಬ್ಬನೆ ಬಂದಮಾರ್ಗದಲಿ
ಲೋಲಲೋಚನೆಯೆಂದುದನು ಸಿರಿ
ಲೋಲನಂಘ್ರಿಗೆ ಸೂಚಿಸದೆ ತ
ನ್ನಾಲಯಕೆ ಮನದೊಳಗೆ ನಾಚುತ ಧನವಿಹೀನತೆಗೆ ೫೦

ಏನನೆಂಬಳೊವನಿತೆ ಗೃಹಕೆ ವಿ
ಹೀನಧನ ತಾ ಹೋಗಲಕಟಾ
ದೀನ ತನದಲಿ ತನ್ನ ಒರವನು ಹಾರುತಿದ್ದವಳು
ಮಾನಿನಿಯ ಮನದಿರವನಕಟಾ
ಶ್ರೀನಿವಾಸನು ನೋಡನಾನಿವ
ಕೇನ ಮಾಡುವೆನೆನುತ ವಿಪ್ರೋತ್ತಮನು ನಡೆತಂದ ೫೧

ನಿತ್ಯತೃಪ್ತನು ಪೂರ್ಣಸುಖ ಸಂ
ಪತ್ಸ್ವರೂಪನು ಯಾಗಭಾಗ ನಿ
ವೃತ್ತ ಕೃಷ್ಣನು ತನ್ನ ಕೈಯವಲಕ್ಕಿಯನು ತೆಗೆದು
ತುತ್ತುಗೊಂಡನು ಜಱಿದು ತನ್ನಯ
ಮತ್ತಕಾಶಿನಿ ಲಕ್ಷ್ಮಿಯನು ನಿಜ
ಭೃತ್ಯರುನ್ನತಿಕೆಯನೆ ಮೆಱೆದನು ಸಕಲಜನ ಹೊಗಳೆ ೫೨

ಧನವನಿತ್ತಡೆ ಮಱೆವನೆನ್ನನು
ಧನಮದಾಂಧತೆಯಿಂದ ಲೆಕ್ಕಿಸ
ನೆನುತ ಕೊಡದೇ ಕಳುಹಿದನು ಕಾರುಣ್ಯ ಚಿತ್ತದಲಿ
ದನುಜಹರನಲ್ಲದಡೆ ಕೊಂಬನೆ
ಧನವನಕಟಾ ತನ್ನ ವನಿತೆಯು
ಮನವನಱಿಯನೆ ಸಕಲ ಚೈತನ್ಯಾತ್ಮನುಯನೆಂದ ೫೩

ಇಂತು ನೆನೆವುತ ನೆನೆವುತಾತ್ಮ ಗೃ
ಹಾಂತಿಕಕೆ ನಡೆತಂದನಾಲಿಸು
ತಂತರಂಗದಲಚ್ಯುತಾಂಘ್ರಿ ಸರೋಜಯುಗಳವನು
ಸಂತಸದಲಭಿವರ್ಣಿಸುತ ಮುನಿ
ಚಿಂತಿತಾಂಘ್ರಿಯ ಪರಮರೂಪೋ
ದಾಂತ ಗುಣಗಣಗಳನು ತದ್ಗತ ಭಾವಭಕ್ತಿಯಲಿ ೫೪

ಚಾರು ಹೇಮನಿಬದ್ಧ ರತ್ನ
ದ್ವಾರಸಿಕರದ ಧರಧರದ ಗುಡಿ
ತೋರಣಂಗಳ ಕಳಶ ಕನ್ನಡಿಗಳ ಮಹೋತ್ಸವದ
ಭೂರಿಭೂಷಣ ವಸನದಲಿ ನರ
ನಾರಿಯರು ರಂಜಿಸಲು ಕಂಡನು
ದೂರದಿಂದೆಯಿತರುತ ವಿಪ್ರೋತ್ತಮನು ನಿಜಗೃಹವ ೫೫

ಆರ ಪುರವಿದು ಬಂದೆನೆಲ್ಲಿಗೆ
ದಾರಿಮುನ್ನಿನದಹುದು ಹರಹರ
ಮೀರಿದಪ್ಪಿದೆನಿದೆಯಲಾ ಶೃಂಗಾರರಸಜಲಧಿ
ಪಾರಮೇಷ್ಠ್ಯದ ವೈಭವದ ನಾ
ಕಾರವೋ ಭಾಪೆನುತ ಭಯದಲಿ
ದೂರದಿಂದೀಕ್ಷಿಸುತ ಗಮಿಸದೆ ನಿಂದನಾವಿಪ್ರ ೫೬

ಸಿಂದು ಸೈವೆಜಿಗಾಗಿ ತನ್ನಯ
ಮಂದಿರವ ಹೊಗಲಮ್ಮದತಿಭಯ
ದಿಂದ ನಡುಗುತ್ತಿರಲು ಕಂಡಳು ಭೂಸುರೋತ್ತಮನ
ಇಂದುಮುಖಿ ನಸುನಗುತ ವನಿತಾ
ವೃಂದ ಶತಪರಿವಾರದಲಿ ನಡೆ
ತಂದು ಕಂಡಪ್ಪಿದಳು ಕಾಲ್ಗಳಿಗೆಜಗಿ ನಿಜಪತಿಯ ೫೭

ಬಾಲೆಯರು ಹೊಂಗಳಸ ಜಲದಲಿ
ಕಾಲುವೊಳೆದುತ್ತಮವೆನಿಪ್ಪ ದು
ಕೂಲವನು ಹೊದಿಸಿದರು ಮಾರ್ಗಶ್ರಮವನಪಹರಿಸಿ
ಸಾಲಹೊಂದಳಿಗೆಗಳ ನವಮಣಿ
ಜಾಲನೀರಾಂಜನದ ಸಂಭ್ರಮ
ದೇಳಿಗೆಯಲಂದಿದಿರುಗೊಂಡುದು ಸಕಲ ಜನನಿವಹ ೫೮

ಆ ಗರುವ ಸುರಪತಿಯ ಭವನಕೆ
ಭೋಗವತಿಯೈಶ್ವರ್ಯಸಿದ್ಧಿಗೆ
ತೂಗಿದರೆ ಶತಗುಣ ಸಮೃದ್ಧವೆನಿಪ್ಪನಿಜಗೃಹದ
ಭೋಗಸಾಧನ ಸಂಪದವನಾ
ಯೋಗನಿಧಿ ಕಾಣುತ್ತ ವಿಸ್ಮಿತ
ನಾಗಿ ತನ್ನೊಳಗೆಂದನತಿಶಯ ಭಾವಭಕ್ತಿಯಲಿ ೫೯

ನಿರುತಮಿದು ಸಾಕ್ಷಾತ್ ವಿಶ್ವಂ
ಭರನ ಪಾವನ ದಿವ್ಯ ಪದಯುಗ
ಸರಸಿರುಹ ಸಂದರುಶನದ ಫಲವೀಮಹಾವಿಭವ
ನಿರುಪಮೈಶ್ವರ್ಯವಿದು ಹರಹರ
ಹರ ಮಹಾದೇವೆನಗೆ ಹೇಳದೆ
ಕರುಣಿಸಿದನಕಟೆನುತ ಹೊಂಪುಳಿಯೋದನಡಿಗಡಿಗೆ ೬೦

ಎತ್ತಲಾನಿಜಮಹಿಮೆ ಕಾಣಿಕೆ
ಯಿತ್ತಲಕಟವಲಕ್ಕಿ ತಾನದ
ತುತ್ತುಗೊಂಡೊಲಿದೀವುದೆತ್ತಲು ಸಕಲ ಸಂಪದವ
ಇತ್ತಡತ್ಯಲ್ಪವನು ತನಗೆ ಮ
ಹೋತ್ತರವ ಮಾಡುವನು ತಾ ನಿಜ
ಭೃತ್ಯರಿಂಗೊಲಿದಿತ್ತುದತಿಕಿಜಿಂದೆಂಬನನವರತ ೬೧

ಎನುತೆನುತ ತತ್ಕೀರ್ತಿ ಗುಣವನು
ನೆನೆದು ವಿಸ್ತರಿಸುತ್ತ ನಾಮವ
ನನವರತ ಕೀರ್ತಿಸುತ ಕೇಳುತ ತತ್ಕಥಾಮೃತವ
ವಿನುತ ವೈಷ್ಣವಸಂಗಸುಖದಲಿ
ದಿನವ ಕಳೆವುತ ಕೃಷ್ಣಪದಯುಗ
ವನಜವಿಶ್ರಾಂತಾತ್ಮನಿದ್ದನು ಬಹಳ ಭೋಗದಲಿ ೬೨

೧೬

# ಉಪಸಂಹಾರ

ಅರಸಕೇಳಾದ್ವಾರಕಾಪುರ
ವರದಲಿಂತಸುರಾರಿರಾಮರು
ಪರಮಸಂತೋಷದಲಿ ರಾಜ್ಯವ ಪಾಲಿಸುತ್ತಿರಲು
ಪರಮಋಷಿಗಳು ತಾಪಸರು ಮುನಿ
ವರರು ಹರಿಪದಕಮಲಯುಗಳದ
ದರುಶನಕೆ ಬರುತಿರ್ದರಖಿಳ ದಿಗಂತ ಸಂತತಿಯು ೧

ಧರೆಯ ರಾಜಕುಮಾರವರ್ಗದ
ನೆರವಿಗಳು ಸುರನರಮುನೀಂದ್ರರ
ನೆರವಿಗಳು ಮಾಗಧರ ವೀರರ ಸೂತವಂದಿಗಳ
ನೆರವಿಗಳು ಗಂಧರ್ವಕಿನ್ನರ
ವರಮಹೋರಗ ಯಕ್ಷರಕ್ಷೋ
ವರರ ನೆರವಿಗಳೆಸೆದವೊತ್ತೊತ್ತೆನಿಸಿ ಪುರದೊಳಗೆ ೨

ಇರುಳು ಹಗಲೆಡವಱಿಯದಿಕ್ಕವು
ಪುರದ ಬಾಗಿಲುಗಳು ಗತಾಗತ
ಭರಿತ ಜನನಿಕರದಲಿ ಸಂಕುಲವಾಗಲನವರತ
ಕರಣವಿಷಯ ಕುಟುಂಬ ಚಿಂತಾ
ತುರರಿಗೀ ನರಜನ್ಮವಫಲದ
ಲುರುಳುವಂತೆ ನಿರರ್ಥವಾದುವು ಮಣಿಕವಾಟಚಯ ೩

ಮೂರ್ತಿಗೊಂಡೋಲಗಿಸುವವು ತ
ತ್ಕೀರ್ತಿ ಸನ್ಮತಿ ತುಷ್ಟಿಪುಷ್ಟಿ ವಿ
ರಕ್ತಿ ಭಕ್ತಿ ವಿಮುಕ್ತಿ ವಿದ್ಯಾವಿದ್ಯೆ ಮೊದಲಾದ
ಶಕ್ತಿಗಳು ಶ್ರುತಿಗಳು ಮಹೋವನಿ
ಷತ್ತುಗಳು ಮಂತ್ರಂಗಳಾಪುರು
ಷೋತ್ತಮನ ಪದಯುಗವನೇನೆಂಬೆನು ಮಹಾದ್ಭುತವ ೪

ಅರಸ ಕೇಳ್ಳೆ ಯೋಗಮಾಯೇ
ಶ್ವರನು ಮುನಿಹೃತ್ಕಮಲ ಚಿಂತಿತ
ಚರಣಕಮಲಪರಾಗಸಹ ಪರಮಾತ್ಮನಿಂತೊಲಿದು
ಧರಣಿಪಾವನ ಮೂರ್ತಿ ಕಲಿಮಲ
ಹರಣಸದಮಳಕೀರ್ತಿ ನಿಜಪದ
ಶರಣಜನ ಸಂಸಾರಿಕನು ರಂಜಿಸಿದನವನಿಯಲಿ ೫

ಮೃತ್ಯುಮುಖಪತಿತರಿಗೆ ಭವಭಯ
ತಪ್ತರಿಗೆ ಮೋಹಾಂಧಕಾರ ನಿ
ವೃತ್ತಿ ದೃಷ್ಟಿಗಳಿಂಗೆ ದುಃಖ ನಿಮಗ್ನಮತಿಗಳಿಗೆ
ಮರ್ತ್ಯರಿಗೆ ಮನವೊಲಿದು ಕರುಣಾ
ಮೂರ್ತಿಸಕಲಾನರ್ಥ ದುಃಖನಿ
ವೃತ್ತಿಯನು ಮಾಡುತ್ತಲಿದ್ದನು ನಿಜಚರಿತ್ರದಲಿ ೬

ಜನಪ ಕೇಳಖಿಳಾಘಹರವೆಂ
ದೆನಿಸಿತಿದೆಲಾ ನಾಮ ಸಂಕೀ
ರ್ತನ ಕಥಾಶ್ರವಣಾನು ಚಿಂತನಗಳು ಜಗತ್ರಯಕೆ
ತನುವಿಡಿದು ಲೀಲೆಯಲಿ ಕರುಣಾ
ವನಧಿ ವರ್ತಿಸಲಲ್ಲದಿರ್ದಡೆ
ಜನಿಸಲಱಿವುದೆ ಸುಗತಿ ಜೀವರಿಗೆಂದನಾಮುನಿಪ ೭

ಆವನಿದನೋದುವನು ಕೇಳುವ
ನಾವನೀ ಮುರಹರನ ಮಂಗಳ
ಪಾವನಾಮಳ ಚರಿತವನು ಕಾರುಣ್ಯಭರಿತವನು
ದೇವಸನ್ನಿಭ ಶುಕಮುನಿಪ್ರ
ಸ್ತಾವಿತವನವರಿಬ್ಬರನು ನೆಱೆ
ಕಾವನಾಕಾರುಣ್ಯನಿಧಿ ನಿಜಪದವನೊಲಿದಿತ್ತು ೮

ಇದನಖಿಳಯೋಗೀಂದ್ರ ಪದಯುಗ
ಪದುಮಚರಿತಧ್ಯಾನ ನಿರ್ಮಳ
ಹೃದಯನಹ ಯೋಗೀಂದ್ರನಖಿಳೋದಿತ ಸದಾನಂದ
ವೇದದಲಭಿವರ್ಣಿಸಿದನಱಿವಂ
ಪಪಲಿ ಗುಣದೋಷವನು ನೋಡದೆ
ವಿದಿತ ತಿದ್ದುವುದೀಕೃತಿಯ ವಿಸ್ಮೃತಪದಾಕೃತಿಯ ೯

ಕರ್ತೃವಿದಕೆ ಹರೀತಕೀಪುರ
ಭರ್ತೃ ಗೋಪೀನಾಥನಾಜ್ಞಾ
ಕರ್ತೃ ಲೇಖಕ ನಾನು ಕೃತಿಗಿಂತಿದೆನೆ ನಿಧಾನಿಸಲು
ವಕ್ತೃವಿನ ಗುಣದೋಷ ಲೇಖನ
ಕರ್ತೃವಿಂಗೆತ್ತಣದು ವಚನ ನಿ
ಯೋಕ್ತೃನಿತ್ಯಾತುಮನೆ ರಕ್ಷಿಸುಗಖಿಳ ಸಜ್ಜನರ ೧೦

# ಶಬ್ದಕೋಶ

## ಅ

| | | |
|---|---|---|
| ಕ್ಕಜ | ೪– ೯೧ | ಆಶ್ಚರ್ಯ |
| ಕ್ಕಾಡು | ೪– ೭೦ | ( ಅಟ್ಟಾಡು ) ನಾಶವಾಗು |
| ಕ್ಕುಳಿಸು | ೫– ೫೬ | ಬಿಗಿಹಿಡಿ, ತಡೆದುಕೊಳ್ಳು |
| ಟ್ಟುಳಿ | ೨– ೩೧ | ಹಿಂಸೆ, ಕಾಟ |
| ದ್ದುದು | ೨– ೩ | ಮುಳುಗಿತು |
| ನಶನ | ೧– ೬ | ಉಪವಾಸ, ನಿರಾಹಾರ |
| ನುವರ | ೩– ೩೬ | ಆಯ್ಕೆ |
| ನುವು | ೩– ೧೫ | ಸಿದ್ಧತೆ, ಉಪಾಯ |
| ಭಿಭವಿಸು | ೧೫– ೩ | ಸೋಲಿಸು, ಅಪಮಾನಗೊಳಿಸು |
| ರೆಗುಳಿ | ೪– ೧೪ | ಕೊಲ್ಲುವವನು (ಜನರನ್ನು ‘ ಅರೆ ’ ಯುವವನು ) |
| ಱೆ | ೪– ೩೬ | ಬಂಡೆ |
| ರ್ತಿ | ೪– ೮ | ಆಸೆ |
| ರ್ಭಕ | ೮– ೩೨ | ಮಗು |
| ಲಗಣಸು | ೫– ೫೦ | ದ್ವೇಷ |
| ವಗಡೆಯತನ | ೪– ೬೩ | ಸಾಹಸ |
| ವಜ್ಞೆ | ೧– ೪ | ಅಲಕ್ಷ್ಯ |
| ವಲಂಬನ | ೧– ೧ | ಆಶ್ರಯ |
| ಸುಬೆಗಲ್ಲು | ೪– ೭೧ | ಅರೆಯುವ ಕಲ್ಲು |
| ಳ್ಳಿಱಿ | ೮– ೮ | ವ್ಯಾಪಿಸು |

| | | |
|---|---|---|
| ಅಂಗವಿಸು | ೫— ೪೮ | ನುಗ್ಗು, ಮುಂದೆಬೀಳು |
| ಅಂಡಲೆ | ೫— ೬೭ | ಹಿಂಸಿಸು |
| ಅಂದಣ | ೧೨— ೩೨ | ಪಲ್ಲಕ್ಕಿ |
| ಅಂಬರ | ೨— ೨೬ | ಆಕಾಶ |
| ಅಂಬರ | ೪— ೮೩ | ವಸ್ತ್ರ, ಬಟ್ಟೆ |

**ಆ**

| | | |
|---|---|---|
| ಆಖಂಡಲ | ೪— ೪೪ | ಇಂದ್ರ |
| ಆಘೋಷಿಸು | ೪— ೨೮ | ಸಾರಿಹೇಳು |
| ಆಪನ್ನ | ೧— ೪ | ಪಡೆದ, ಹೊಂದಿದ |
| ಆಯತಿಕೆ | ೬— ೨೫ | ಹಿರಿಮೆ, ಉದಾತ್ತತೆ, ಹೆಚ್ಚಿಗೆ |
| ಆಲೋಲ | ೭— ೧೮ | ಚಂಚಲ |
| ಆಸಾರ | ೫— ೩೨ | ವೃಷ್ಟಿ |
| ಆಳ್ದನ್ | ೨— ೩೩ | ಸ್ವಾಮಿ, ಒಡೆಯ |

**ಇ**

| | | |
|---|---|---|
| ಇಕ್ಕೆಹಕ್ಕೆ | ೫— ೩೬ | ವಾಸಸ್ಥಾನ |
| ಇಟ್ಟಣಿಸು | ೫—೧೩೧ | ಗುಂಪುಕೂಡು |
| ಇಟ್ಟಳಿಸು | ೫— ೨೯ | ಒತ್ತಾಗಿ ಸೇರು, ಗುಂಪುಕೂಡು |
| ಇಟ್ಟಿ | ೫—೧೩೧ | ಈಟಿ |
| ಇಡು | ೪— ೬೧ | ಹೊಡೆ |
| ಇರವು | ೫— ೨ | ಇರುವಿಕೆ, ವಾಸ |
| ಇಂಗಳ | ೨— ೬ | (ಅಂಗಾರ) ಕೆಂಡ |
| ಇಂಧನ | ೧೫— ೨೩ | ಸೌದೆ |

**ಈ**

| | | |
|---|---|---|
| ಈಡಿಱು | ೪— ೭೦ | ಹೆಚ್ಚು, ಮೇರೆಮೀರು |

## ಉ

| | | |
|---|---|---|
| ಉಕ್ಕುಸೊಕ್ಕು | ೫–೧೧೯ | ಹೆಚ್ಚಾದ ಕೊಬ್ಬು |
| ಉಡಿ | ೧೫– ೨೪ | ಮುರಿ |
| ಉತ್ತರಿಸು | ೭– ೧೧ | ದಾಟು |
| ಉತ್ಪಾತ | ೫– ೧ | ದುರ್ನಿಮಿತ್ತ, ಅಪಶಕುನ |
| ಉದ್ವೃತ್ತ | ೪– ೬೯ | ಉಕ್ಕು |
| ಉಪಲಾಲಿತ | ೧– ೫ | ಹೊಗಳಿಸಿಕೊಂಡ |
| ಉಪಸನ್ನ | ೪– ೪೨ | ಸಮೀಪಸ್ಥ, ಹತ್ತಿರದ |
| ಉಬ್ಬಟೆ | ೪– ೩೭ | ಹೆಚ್ಚಿಗೆ |
| ಉಬ್ಬರಿಸು | ೫– ೪೧ | ಹೆಚ್ಚಾಗು, ಉಬ್ಬು |
| ಉಲ್ಲೋಲ | ೩– ೨೦ | ದೊಡ್ಡತೆರೆ |

## ಎ

| | | |
|---|---|---|
| ಎಕ್ಕತುಳ | ೪– ೫೭ | ಸರ್ವಶಕ್ತಿ |
| ಎಡೆಯಾಡು | ೪– ೫೫ | ಓಡಾಡು, ಸಂಚರಿಸು |
| ಎಱೆಯ | ೨– ೨೫ | ಒಡೆಯ |
| ಏಳಿದಿಟ | ೩– ೩೮ | ತಿರಸ್ಕಾರ |

## ಐ

| | | |
|---|---|---|
| ಐದೆ | ೧೨– ೧೦ | ಸುಮಂಗಲಿ |

## ಒ

| | | |
|---|---|---|
| ಒಕ್ಕಲಿಕ್ಕು | ೪– ೫೭ | ಬಡಿದುಹಾಕು |
| ಒಗುಮಿಗೆ | ೫– ೫೪ | ಸಮೃದ್ಧಿ, ಹೆಚ್ಚಿಗೆ |
| ಒಗ್ಗು | ೫– ೩೪ | ಗುಂಪು |
| ಒಪ್ಪ | ೧೩– ೨ | ಕಾಂತಿ, ಅಂದ |

## ಓ

| | | |
|---|---|---|
| ಓಕರಿಸು | ೫— ೧೬ | ಅಸಹ್ಯವಾಗು |
| ಓರ್ಗುಡಿಸು | ೫— ೬ | ಒಟ್ಟುಗೂಡಿತು (?) |
| ಓಲಾಡು | ೫—೧೦೫ | ಆನಂದಿಸು, ಕುಣಿದಾಡು |
| ಓವರಿ | ೪— ೭೧ | ಒಳಮನೆ, ಗರ್ಭಗೃಹ, ಉಪಗೃಹ |

## ಕ

| | | |
|---|---|---|
| ಕಡಿತಲೆ | ೬— ೩೩ | ಕತ್ತಿ |
| ಕಯ್ಯೊಡನೆ | ೫—೧೧೧<br>೬— ೪೦ | ಕೂಡಲೆ |
| ಕಸರಿಕೆ | ೧೧— ೨೭ | ಅಸಮಾಧಾನ |
| ಕಳ | ೫— ೬೫ | ಯುದ್ಧ, ಯುದ್ಧರಂಗ |
| ಕಳಿ | ೬— ೩೫ | ಬಿಡು |
| ಕಾರ್ಪಣ್ಯ | ೩— ೨೭ | ದೈನ್ಯ |
| ಕುಡಿತೆ | — ೩೮<br>೧೫— ೩೭ | ಬೊಗಸೆ |
| ಕುತ್ತು | ೪— ೮೭ | ಹೊಡೆ, ಘಾತಿಸು |
| ಕೃತಿ | ೪— ೧೦ | ಧನ್ಯ, ಪುಣ್ಯಶಾಲಿ |
| ಕೃತ್ತಿವಾಸ | ೪— ೮೪ | ಶಿವ |
| ಕೆಡೆ | ೨— ೭ | ಬೀಳು |
| ಕೇಣಿ | ೬— ೭ | ಶ್ರೇಣಿ |
| ಕೈವಾರಿ | ೧೦— ೧೩ | ಹೊಗಳು ಭಟ್ಟ |
| ಕೋರಡಿಗ | ೪— ೬೫ | ತಂಟೆಕೋರ |
| ಕೋಳುಗೊಳ್ಳು | ೫— ೮೮ | ಪರವಶವಾಗು |
| ಕಂದರ | ೪— ೨೧ | ಕಣಿವೆ, ಗವಿ |
| ಕಂದು | ೧೧— ೨೭ | ನಿರುತ್ಸಾಹ |

| | | |
|---|---|---|
| ಕ್ರಾಂತಿ | ೫– ೭೬ | ಹೋಗುವಿಕೆ ( ಮಾರ್ಗಕ್ರಾಂತಿ-ದಾರಿನಡೆಯುವುದು ) |

### ಖ

| | | |
|---|---|---|
| ಖಂಡೆಯ | ೫– ೫೫ | ಕತ್ತಿ |

### ಗ

| | | |
|---|---|---|
| ಗದ್ದುಗೆ | ೨– ೨೭ | ಪೀಠ |
| ಗಸಣಿ | ೬– ೨೯ | ತೊಂದರೆ, ವ್ಯಥೆ |
| ಗ್ಲಾನಿ | ೫– ೪೭ | ನೋವು, ದುಃಖ |
| ಗುಡಾಳಕ | ೩– ೭ | ಆಭರಣ ( ? ) |
| ಗೋಣು | ೪– ೧೭ | ಕತ್ತು |
| ಗೋರಸ | ೪– ೨೩<br>೫– ೮೬ | ಹಸುವಿನ ಹಾಲು ಅಥವಾ ಮಜ್ಜಿಗೆ |
| ಗೋಳುಂಡೆ | ೪– ೫೯ | ಹಿಂಸೆ, ಸಂಕಟ |
| ಗೊಂದಣ | ೧೩– ೧೯ | ಸಮೂಹ |

### ಘ

| | | |
|---|---|---|
| ಘರಟ್ಟ | ೫–೧೨೮ | ವಿನಾಶಕ |

### ಚ

| | | |
|---|---|---|
| ಚಿಗಿ | ೩– ೩೫ | ಹಾರು |
| ಚೂಣಿ | ೮– ೩೬ | ಸೈನ್ಯದ ಮುಂಭಾಗ |
| ಚಂಡಿಕೆ | ೩– ೩೦ | ದುರ್ಗಿ |

### ಛ

| | | |
|---|---|---|
| ಛಡಾಳಿಸು | ೨– ೩ | ವ್ಯಾಪಿಸು |

## ಜ

| | | |
|---|---|---|
| ಜಕ್ಕುಲಿಸು | ೫– ೯ | ವಿನೋದಗೊಳಿಸು, ಸಂತೋಷಪಡಿಸು |
| ಜೀವಿಕೆ | ೨– ೩೨ | ಜೀವನೋಪಾಯ |

## ತ

| | | |
|---|---|---|
| ತರಳೆ | ೩– ೧೨ | ಹುಡುಗಿ, ಕೋಮಲೆ |
| ತುರು | ೫– ೪ | ಹಸು |
| ತೋಟಿ | ೫–೧೧೩ | ಜಗಳ, ಯುದ್ಧ |
| ತೂಳು | ೯– ೨೫ | ಬೆನ್ನಟ್ಟು, ಓಡಿಸು |
| ತ್ರಿದಶ | ೩– ೪೦ | ದೇವತೆ |

## ದ

| | | |
|---|---|---|
| ದಡಿ | ೬– ೪ | ದೊಣ್ಣೆ |
| ದ್ರುಮ | ೧– ೨ | ಮರ |
| ದುರ್ಧರುಷ | ೫– ೫೩ | ದುರ್ಭೇದ್ಯ |
| ದಂಡಿ | ೩– ೨ | ರೀತಿ |

## ಧ

| | | |
|---|---|---|
| ಧರಧುರ | ೫– ೮೭ | ಹೆಚ್ಚು, ಅತಿಶಯ |

## ನ

| | | |
|---|---|---|
| ನನ್ನಿ | ೨– ೧೫ | ಸತ್ಯ |
| ನಿಕಾಯ | ೫– ೪ | ಸಮೂಹ |
| ನಿದಾಘ | ೯– ೪೭ | ಬೇಸಗೆ |
| ನಿಬದ್ಧ | ೫– ೧೦ | ಕಟ್ಟುಬಿದ್ದ |
| ನಿರೋಧ | ೨– ೭ | ಅಡ್ಡಿ, ನಿರ್ಬಂಧ |

| | | |
|---|---|---|
| ನಿರ್ದಾಯ | ೪– ೫೮ | ಸಂಪೂರ್ಣ |
| ನೂಪುರ | ೪– ೪ | ಗಗ್ಗರ |
| ನೆಗಳು | ೫– ೫ | ಮಾಡು |
| ನೇವಳ | ೫–೧೧೫ | ಉಡಿದಾರ, ( ಬೆಳ್ಳಿ ಅಥವಾ ಚಿನ್ನದ್ದು ) |
| ನೊರಜು | ೫– ೬೮ | ನೊಳ್ಳೆ |
| ನೃಶಂಸ | ೬– ೧ | ಕ್ರೂರಿ, ನೀಚ |

## ಪ

| | | |
|---|---|---|
| ಪಟ್ಟಿಸ | ೫–೧೩೧ | ಭರ್ಜಿ |
| ಪತಿಕರಿಸು | ೧– ೬ | ರಕ್ಷಿಸು, ಆದರಿಸು |
| ಪರಿಚ್ಛದ | ೮– ೨೭ | ಮೇಲುಹೊದಿಕೆ |
| ಪರಿಭವಿಸು | ೨– ೨೮ | ಅಪಮಾನಪಡಿಸು |
| ಪರಿವಡಿಸು | ೧– ೬ | ಅಲಂಕೃತನಾಗು |
| ಪರೀತ | ೩– ೪೧ | ಕಳೆದುಹೋದ |
| ಪಾತ | ೪– ೮೧ | ಬೀಳುವಿಕೆ |
| ಪಾರಾವಾರ | ೫– ೮೯ | ಸಾಗರ |
| ಪಾರಿಬರುಹ | ೨– ೮ | ಬಹುಮಾನ |
| ಪಿಲ್ಲಣಿಗೆ | ೬– ೧೭ | ಗದೆ, ಪರಿಘ |
| ಪುಳಿನ | ೫– ೧೬ | ಮರಳು |
| ಪೂರ | ೫–೧೦೦ | ಪ್ರವಾಹ |

## ಬ

| | | |
|---|---|---|
| ಬಣಗು | ೧೦– ೧೮ | ಕ್ಷುದ್ರ, ಅಲ್ಪ |
| ಬೆರಟು | ೪– ೭೧ | ಬೆರಳುಗಳಿಂದ ಅಗೆ, ( ನಖ ಖನನ ) |
| ಬೆಱ್ತಿ | ೧೦– ೪ | ಗರ್ವಿಸು |
| ಬೆಳಗೆಯ್ | ೨– ೬ | ಬೆಳೆದಹೊಲ |

## ಭ

| | | |
|---|---|---|
| ಭಾರ | ೧೧– ೫ | ಇಪ್ಪತ್ತು ತೊಲ |
| ಭಿತ್ತಿ | ೮– ೫೫ | ಗೋಡೆ |
| ಭಂಜನ | ೩– ೧೩ | ವಿನಾಶ, ದಹನ |

## ಮ

| | | |
|---|---|---|
| ಮಖ | ೫– ೧೬ | ಯಜ್ಞ |
| ಮತ್ತಕಾಶಿನಿ | ೫–೧೨೩ | ಶ್ರೇಷ್ಠ ಸ್ತ್ರೀ |
| ಮನ್ನೆಯ | ೧೧– ೩೯ | ಪಾಳೆಯಗಾರ, ಮುಖಂಡ |
| ಮುಮ್ಮನೆ | ೪– ೫೫ | ಮುಂದಿನ ಮನೆ, ಮನೆಯ ಮುಂಭಾಗ |
| ಮುರಜ | ೨– ೩ | ಒಂದು ಬಗೆಯ ಮದ್ದಳೆ |
| ಮುಱಿ | ೩– ೨೪ | ಭಂಗಪಡಿಸು |
| ಮುಱುಹು | ೫– ೩೨ | ತಿರುಗಿಸಿಕೋ |
| ಮೂವೆ | ೨– ೩೩ | ಮೂರು ಸಲ |
| ಮೊದಲು | ೩– ೪೦ | ಅಸಲು, ಬುಡ |
| ಮೋದು | ೪– ೧೩ | ಹೊಡೆ |
| ಮೋಹು | ೨– ೭ | ಹೊಡೆ, ಸೇರಿಸು |
| ಮಂಡೆ | ೨– ೩೦ | ತಲೆ |
| ಮಂಥಣಿ | ೪– ೭೧ | ಕಡೆಗೋಲು |
| ಮುಂಡಾಡು | ೪– ೪೧ | ಮುದ್ದಾಡು |

## ರ

| | | |
|---|---|---|
| ರಂಗಗಾರ | ೫–೧೦೮ | ಅಗಸ |

## ವ

| | | |
|---|---|---|
| ವರ್ತನೆ | ೪– ೭ | ಗೊತ್ತುಪಡಿಸಿದ ಧನ |
| ವೃತ್ತ | ೪– ೬೪ | ಚರಿತ್ರೆ, ನಡತೆ |

| | | |
|---|---|---|
| ವ್ಯಾಜ | ೪– ೮೪ | ನೆಪ |
| ವಂಕ | ೫– ೨೭ | ವಕ್ರ |
| ವೆಂಟಣಿಸು | ೫–೧೩೧ | ಸುತ್ತುಗಟ್ಟು |

## ಸ

| | | |
|---|---|---|
| ಸದೆ | ೩– ೪೦ | ಹೊಡೆ, ಚಚ್ಚು |
| ಸನಾಮ | ೨– ೪ | ಹೆಸರಿನಿಂದ ಕೂಡಿದ (ಪ್ರಸಿದ್ಧ) |
| ಸಾಲಭಂಜಿಕೆ | ೫– ೨೯ | ಬೊಂಬೆ |
| ಸಾಸಿ | ೫– ೬೨ | ಸಾಹಸಿ |
| ಸಿತಗತನ | ೪– ೭೭ | ತುಂಟತನ |
| ಸೆಳೆ | ೪– ೭೨ | ಬೆತ್ತ |
| ಸೇಸೆ | ೪– ೫ | ಅಕ್ಷತೆ |
| ಸ್ತೇಯ | ೪– ೫೮ | ಕಳ್ಳತನ |
| ಸ್ನುತ | ೪– ೬೯ | ಸೋರುವ, ಹನಿಹನಿಯಾಗಿ ಜಿನುಗುವ |
| ಸಂತರ್ಪಿಸು | ೫– ೮೩ | ತೃಪ್ತಿಗೊಳಿಸು |
| ಸಂಪ್ರತಿಪನ್ನ | ೪– ೮೫ | ಹೊಂದಿರುವ |
| ಸಂಬಳ | ೨– ೧೦ | ಮಾಸಾಶನ ಅಥವಾ, ವರ್ಷಾಶನ, ಪಾಥೇಯ |
| ಸಿಂಗಿ | ೨– ೬ | ಹೆಣ್ಣು ಸಿಂಹ |

## ಹ

| | | |
|---|---|---|
| ಹಕ್ಕೆ | ೫– ೩೬ | ಹಾಸಿಗೆ, ವಿಶ್ರಾಂತಿಸ್ಥಳ |
| ಹಣ್ಣು | ೫– ೫೭ | ಸಿದ್ಧಗೊಳಿಸು, ಏರ್ಪಡಿಸು |
| ಹಱಿ | ೬– ೩೦ | ತಂಬಟೆ |
| ಹಸರ | ೧೫– ೩೬ | ಸಮೂಹ |
| ಹಳಚು | ೮– ೧೬<br>೬– ೨೯ | ಹೊಡೆದಾಡು |

| | | |
|---|---|---|
| ಹಳವಿಸು | ೮– ೧ | (ದ್ಧ.) ಪ್ರಲಪಿಸು, ಅಸಂಬದ್ಧನಾಗಿ ಮಾತನಾಡು, ಗೋಳಾಡು |
| ಹಾಹೆ | ೩– ೩೩ | ಬೊಂಬೆ |
| ಹೀಹಾಳಿ | ೫– ೩೫ | ಆಶ್ಚರ್ಯ, ಸಂಭ್ರಮ |
| ಹುಡಿ | ೪– ೫೫ | ದೂಳು |
| ಹೂವಲಿ | ೨– ೨ | ರಂಗವಲ್ಲಿ |
| ಹೆಕ್ಕಳಿಸು | ೫– ೨೬ | ಗರ್ವಿಸು |
| ಹೊಗರು | ೬– ೧೧ | ಕಾಂತಿ |
| ಹೊಲಬು | ೧೫– ೨೬ | ದಾರಿ |
| ಹಂದೆ | ೩– ೩೬ | ಹೇಡಿ |
| ಹೊಂದು | ೭– ೪<br>೨– ೧೦<br>೪– ೩೩ | ಸಾಯಿ |



ಬೆಂಗಳೂರು ಪ್ರೆಸ್, ಮೈಸೂರು ಬ್ರಾಂಚಿನಲ್ಲಿ ಮುದ್ರಿಸಲ್ಪಟ್ಟಿತು